**ಕ. ರಾ. ಕೃ. ಅವರ**

**'ಅಂಬಿಗರ ಗಂಗ' ಓದಿದಾಗ........**

ಇಲ್ಲಿಯ ಕಥನ ಕವನಗಳಲ್ಲಿ ಶಿವನು ಅಂಬಿಗರ ಗಂಗನಾಗಿ, ತನ್ನ ಜಡೆಯಲ್ಲಿ ಗಂಗೆಯನ್ನೆತ್ತಿಕೊಂಡು ಮನೆಗೆ ತಂದು, ತನ್ನ ಪತ್ನಿ ಗೌರಿಯೊಡನೆ ಕೂಡಿ ಬಾಳುವಂತೆ ಮಾಡುವ ಕತೆಯಲ್ಲಿ ಸವತಿ ಮಾತ್ಸರ್ಯವನ್ನು ನಿವಾರಣೆ ಮಾಡಿದ ಚಮತ್ಕಾರಿಕ ಸಂಭಾಷಣೆ ಇದೆ. ಇರೋಬಿಯ ಕತೆಯಲ್ಲಿ ಅಚಲವಾದ ಪತಿ ಭಕ್ತಿಯ ಹೃದಯದ್ರಾವಕ ಸನ್ನಿವೇಶವಿದೆ. ಇವುಗಳಲ್ಲಿ ಅರಳಿರುವ ಪ್ರತಿಭೆ, ಭಾವಕ್ಕೆ ತಕ್ಕ ಮಾತಿನ ಉಡುಗೆ, ಇಂಪಾದ ಹಾಡಿನ ಧಾಟಿ. ಯಾವ ದೇಶದ ಉಚ್ಚಕವಿಗಳ ಕವನಕ್ಕೂ ಕಡಿಮೆಯಾದುವಲ್ಲ. ಕತೆ ಹೇಳುವ ಕೌಶಲವಂತೂ ಶ್ರೇಷ್ಠ ಕಥಾ ಲೇಖಕರಿಗೂ ಮೇಲ್ಪಂಕ್ತಿ ಹಾಕಿಕೊಡುವಂತಿದೆ.

—ಶ್ರೀ ಜಿ. ಆರ್. ಪಾಂಡೇಶ್ವರ್,
ALL INDIA RADIO

* * * *

"ಅಂಬಿಗರ ಗಂಗ"ದಲ್ಲಿ ಜಾನಪದ ಕಥನಕವನಗಳು ಇವೆ. ಅಂಬಿಗರ ಗಂಗ, ಜವರಾಯ ಬಂದಾನು, ಮಳೆರಾಯ ಮಾರ್ಥಿಣ್ಣಿ ಕವನಗಳು ಮನಸ್ಸನ್ನು ಸೆರೆಹಿಡಿದು ನಿಲ್ಲಿಸುತ್ತವೆ. ಬಂಜೆ ಹೊನ್ನಮ್ಮನ ಕರುಣಕಥೆಯು ವಿದ್ರಾವಿಕವಾಗಿದೆ.

—ಕರ್ಮವೀರ

* * * *

ಕನ್ನಡ ನಾಡಿನ ಜಾನಪದ ಕಥೆಯು ಹೇಳುವ "ಅಂಬಿಗರ ಗಂಗ" ಜಾನಪದ ಗೀತಗಳ ಸಂಕಲನ ಗ್ರಾಮ್ಯಕಾವ್ಯ ಪ್ರಿಯರಿಗೊಂದು ಅಪೂರ್ವ ಸಂಗ್ರಹ

—ಶ್ರೀ ವಿಜಯ, ತಾಯಿನಾಡು

ಕಾವ್ಯೋದಯ ಕಿರಣ-೭ ಆಯ್ದ ಮುತ್ತುಗಳು-೪

# ಮಲ್ಲಿಗೆ ನಗುತಾವೆ

## (ಜನಪದ ಗೀತೆಗಳು)



ಸಂಕಲಿಸಿದವ






ಕಾವ್ಯೋದಯ ಪ್ರಕಾಶನ
'ವಿದ್ಯಾಶ್ರಮ'
ಸರಸ್ವತಿಪುರಂ, ಮೈಸೂರು.

ಮೊದಲನೆಯ ಮುದ್ರಣ ೧೯೫೫







ಕಲಾವಿದರು :
ಶ್ರೀ ಪಿ. ಆರ್. ತಿಪ್ಪೇಸ್ವಾಮಿ, ಬಿ.ಎ.

ಅಚ್ಚಾಗುತ್ತಿದೆ :
"ಚುಂಚನಗಿರಿರಾಯ" (ಜನಪದ ಗೀತೆಗಳು)
"ಶ್ರೀ ಆದಿಚುಂಚನಗಿರಿ" (ಜನಪದ ಪ್ರಬಂಧಗಳು)

ಪ್ರತಿಯ ಬೆಲೆ :
ಸಾಧಾರಣಪ್ರತಿ ೨-೦೦, ಉತ್ತಮಪ್ರತಿ ೨-೫೦, ಕ್ಯಾಲಿಕೊಪ್ರತಿ ೩-೦೦

ಅಚ್ಚುಮಾಡಿದವರು :
ಪಿ. ನಾಗಣ್ಣ, ಶ್ರೀ ವೆಂಕಟೇಶ ಪ್ರೆಸ್, ಮೈಸೂರು.

# ಮಲ್ಲಿಗೆ ಮುಡಿಯುವ ಮೊದಲು....

ನಮ್ಮ ಜಾನಪದ ಸಾಹಿತ್ಯಸಂಗ್ರಹಗಳ ಪ್ರಕಟಣೆಯ ನಾಲ್ಕನೆಯ ಹೆಜ್ಜೆ ಇದು. ಭಕ್ತಿಗೀತೆಗಳನ್ನು, ಕೌಟುಂಬಿಕ ಗೀತೆಗಳನ್ನೂ, ಕೋಲು ಗೀತೆಗಳನ್ನೂ ಹಲವು ಪ್ರೇಮಗೀತೆಗಳನ್ನೂ ಈ ಸಂಕಲನದಲ್ಲಿ ಕೊಡ ಲಾಗಿದೆ.

ಕನ್ನಡನಾಡಿನ ನಾನಾ ಕಡೆಗಳಲ್ಲಿ ಸಂಚಾರ ಕೈಗೊಂಡು ಸಂಗ್ರಹಿಸಿದ ಹಾಡುಗಳು ಇಲ್ಲಿವೆ. ತುಮಕೂರು, ಬೆಳ್ಳೂರು, ತುರುವೇಕೆರೆ, ತೀರ್ಥಹಳ್ಳಿ, ಕಡೂರು, ಮರಳವಾಡಿ ಮತ್ತು ಕನಕಪುರ ಇನ್ನು ಮುಂತಾದ ಕಡೆಗಳಲ್ಲಿ ಗ್ರಾಮನಾಡಿನ ಅಕ್ಕತಂಗಿಯರು ಹಾಡಿರುವ ಈ ಹಾಡುಗಳನ್ನು ಇಲ್ಲಿ ಸಂಕಲಿಸಿರುವುದನ್ನು ಓದುಗರು ಕಾಣಬಹುದು.

ನಮ್ಮ ಮುಂದಿನ ಪ್ರಕಟಣೆಯಲ್ಲಿ ಪ್ರಸಿದ್ಧ ಕೆಲವು ಪೌರಾಣಿಕ ಮತ್ತು ಐತಿಹಾಸಿಕ ಸ್ಥಳಗಳನ್ನು ಕುರಿತು ಜನಪ್ರಿಯ ಜಾನಪದ ಕವಿಗಳು ಹಾಡಿರುವ ಗೀತೆಗಳನ್ನು ಪ್ರಕಟಿಸಲು ನಿರ್ಧರಿಸಿದ್ದೇವೆ. ಈ ಸುಂದರ ಸಂಕಲನಕ್ಕೆ ಮೊದಲಿನಂತೆ ತಮ್ಮ ಪ್ರೋತ್ಸಾಹದ ಹಸ್ತವನ್ನು ನೀಡಿದ ಗೆಳೆಯ ಜೀಶಂಪರಿಗೂ, ತಮ್ಮ ಕಲಾಕೃತಿಗಳಿಂದ ಈ ಕೃತಿಯ ಮೇಲುಹೊದಿಕೆಯ ಸೊಬಗನ್ನು ಹೆಚ್ಚಿಸಿದ ಗೆಳೆಯ ಪಿ. ಆರ್. ತಿಪ್ಪೇಸ್ವಾಮಿಯವರಿಗೂ ನಾನು ಋಣಿ. ಗೆಳೆಯ ನಾಗಣ್ಣನವರು ತುಂಬ ಉತ್ಸಾಹದಿಂದ ಕೃತಿ ಹೊರಬರಲು ಸಹಕರಿಸಿದ್ದಾರೆ, ಅವರಿಗೂ ನಾನು ಕೃತಜ್ಞನು.

ತಾ|| ೧೫-೪-೧೯೫೮
ವೈಸೂರು

ಇತಿ ತಮ್ಮ
ಕ.ರ.ಕೃ

# ಮಲ್ಲಿಗೆ ಮುಗುಳು

## ದಳ ೧—ಪ್ರಾರ್ಥನೆ


ಚಿತ್ರ : ಹರಿಯುತ್ತಿರುವ ಕಾವೇರಿ ನದಿ .... ೨
೧. ಸರಸ್ವತಿ .... .... .... .... ೩
೨. ಪ್ರಾರ್ಥನೆ .... .... .... .... ೭
೩. ಕೆಂಪವ್ವ ನೆನೆದು .... .... .... ೯
೪. ಮಾರವ್ವ ಹಾಡುಗಳು... .... .... ೨೧
೫. ಮೊದಲು ನೆನೆದೇವು .... .... .... ೨೮
೬. ಪ್ರಾರ್ಥನೆ .... .... .... .... ೩೫
೭. ಮುಳಕಟ್ಟೆ ಹುಚ್ಚವ್ವ ಹಾಡುಗಳು .... ೩೬
೮. ಪುಟ್ಟಮಾರಿ ಕುರಿತು .... .... .... ೪೩
೯. ಮಲೆನಾಡಿನ ದೀವಳಿಗೆ ಹಾಡುಗಳು .... ೫೦
೧೦. ಬೆಳ್ಳಿಯ ಕೋಲೆ ಸುಖನಿದ್ರೆ .... .... ೫೩
೧೧. ನಾರಾಯಣಸ್ವಾಮಿ ಹಾಡುಗಳು.. .... ೫೪


## ದಳ ೨—ಕುಟುಂಬ


ಚಿತ್ರ : ತಂಗ್ಯಮ್ಮ ಬರುತಾಳೆ ತೌರೀಗೆ .... ೫೮
೧೨. ನಿನ್ನಾಸೆ ನನ್ನ ಬಿಡದಲ್ಲಿ .... .... ೫೯
೧೩. ತಂಗ್ಯಮ್ಮ ಬರುತಾಳೆ ತವರೀಗೆ .... .... ೬೨
೧೪. ಅವನು ಧರ್ಮರಳಿಯು ದೊರೆಮಗ .... ೬೪
೧೫. ನೀನಿದ್ರೆ ನಮಗೆ ಐಭೋಗ .... .... ೬೬
೧೬. ನಾನು ಹೆಣ್ಣು ಕೊಟ್ಟೇನು ಬರಹೇಳಿ .... ೬೮
೧೭. ನಾನ್ಹೋಗಿ ಬರುತೀನಿ ತವರೀಗೆ.... .... ೭೧
೧೮. ಬಾರೇ ತಂಗ್ಯಮ್ಮ ತೌರೀಗೆ .... .... ೭೩
೧೯. ಹೊನ್ನರಳಿಯಂತ ಒಟಹುಟ್ಟು .... .... ೭೫
೨೦. ನೈದಯ್ಯ .... .... .... .... ೭೬
೨೧. ದೂರಕೊಟ್ಟೆನೆಂದು ಅಳಬೇಡ .... .... ೭೯
೨೨. ಮುಡಿದ ಹೂವು ಮೂರು ಜಡೆಯಾದೊ .... ೮೧
೨೩. ತೌರು ನೆನೆದೇವು .... .... .... ೮೩

೨೪. ನಾ ಹಾಲಿನಡಿಗೆ ಮೂಡಿ ಫಲವೇನು .... ೮೫
೨೫. ನನ್ನ ಬಿನ್ನಾಣೆ ಅಣ್ಣಯ್ನ ಬರಹೇಳಿ .... ೮೭
೨೬. ತಮ್ಮಯ್ಯನೊಡನೆ ತಂಗ್ಯಮ್ಮ .... ೯೦
೨೭. ತಂಗ್ಯಮ್ಮನ ದುಃಖ .... .... ೯೪
೨೮. ನಾಳೆ ನನ್ನೂರಲ್ಲಿ ಇರಬೇಡ.... .... ೯೫
೨೯. ಚಿನ್ನದುಂಗುರವ ಗೆಲುಬೇಕು .... ೯೮
೩೦. ತಲೆಬಾಗಲಿಲ್ಲ ನನ ತಮ್ಮ.... .... ೧೦೧
೩೧. ನಿನ್ನ ಜೋಕೀಗೆ ನಾಯಿ ಬಗಿಳ್ಯಾವು.... ೧೦೨

## ದಳ ೩—ಪ್ರೇಮ ಪೂಜೆ

ಚಿತ್ರ: ಆಡೂತ ಬಂದಿರುವ ಅತಿರಂಬೆ .... ೧೦೪
೩೨. ಬಿಡಿ ಹಾಡುಗಳು... .... .... ೧೦೫
೩೩. ಗೌಡನ ಮಗಳು.... .... .... ೧೦೯
೩೪. ನಾರಿ ವೈಯಾರಿ ಬಾರೇ .... .... ೧೧೧
೩೫. ಆಡೂತ ಬಂದವಳೆ ಅತಿರಂಬೆ .... ೧೧೩
೩೬. ಎಲೆನಾರೀ ಬಾಯೆಲ್ಲಾ ಕೆಂಪಗ್ಯಾಕೆ .... ೧೧೫
೩೭. ಬೇಲೂರ ಚೆನ್ನಯ್ನ ಹಾಡುಗಳು .... ೧೧೭
೩೮. ಸರಸವೆಂಬೋದು ಹರುಷಾವೆ .... ೧೨೦

## ದಳ ೪—ಕೋಲು ಮಲ್ಲಿಗೆ ಕೋಲೆ

ಚಿತ್ರ : ಕೋಲಾಟವಾಡುವುದು .... .... ೧೨೨
೩೯. ಮುನಿಯಪ್ನ ಹಾಡು .... .... ೧೨೩
೪೦. ಕೋಲು ಆಟವು ಚೆಂದ .... .... ೧೨೪
೪೧. ಉದುರು ಉದುರು ಮಲ್ಲಿಗೆ... .... ೧೨೭
೪೨. ಜುಂಜಪ್ನ ನೆನೆದು .... .... ೧೨೯
೪೩. ಜುಂಜಪ್ನ ಹಾಡು .... .... ೧೩೧
೪೪. ಜುಂಜಪ್ನ ಗೀತೆ.... .... .... ೧೩೨

೪೫ ಜುಂಜಪ್ಪ ಕುರಿತ ಪದ .... .... ೧೩೩
೪೬ ಕೋಲು-ಕೋಲಣ್ಣ ಕೋಲೆ .... ೧೩೫
೪೭ ಜವರಾಯ ಬಂದಾನೆ .... .... ೧೩೬

**ದಳ ೫—ರಣ ಕಹಳೆ**

ಚಿತ್ರ : ಮದಕರಿನಾಯಕನು ಕಟ್ಟಿಸಿದ ಚಿತ್ರದುರ್ಗದ ಕೋಟೆ
೪೮ ಚಿತ್ರದುರ್ಗದ ಮದಕರಿನಾಯಕನ ಗೀತೆಗಳು ೧೩೯
೪೯ ಏನು ಹೇಳಲೊ ನಿನ್ನ ಬಿರುದಾ .... ೧೪೧
೫೦ ನಾಯಕನ ರಥವ ಕುರಿತು ಹಾಡುವ ಹಾಡು ೧೪೨
೫೧ ಮದಕರಿನಾಯಕನನ್ನು ನೆನೆದು .... ೧೪೪
೫೨ ದೈವಾಗೊ ನೀರತಡಿರಂಗಾ.... .... ೧೪೬

**ದಳ ೬—ಬಿಡಿ ಹೂ**

ಚಿತ್ರ : ಜೋಳದ ಹೊಲ ಕಾಯುತ್ತಿರುವುದು ೧೪೮
೫೩ ಬಿಡಿ ನುಡಿಗಳು.... .... .... ೧೪೯
೫೪ ನೀವು ಧರ್ಮಾಕೆ ಧಾರೆ ಎರೆಕೊಳ್ಳಿ .... ೧೫೭
೫೫ ತೂಗು ತೂಗು ಉಯ್ಯಾಲೆಯಾ .... ೧೫೯
೫೬ ತೂಗೀರೆ ಚಂದ್ರಾನ ತೂಗೀರೆ ಸುದ್ರಾನ ೧೬೦
೫೭ ಪುಸ್ತಕ ವಿಮರ್ಶೆಗಳು .... .... ೧೬೧


## ಮುದ್ರಣದಲ್ಲಿರುವ ಜಾನಪದ ಗೀತ ಸಂಗ್ರಹಗಳು.

**೧. ಮೇಲುಕೋಟೆ ಚೆಲುವರಾಯ ಮತ್ತು ಇತರ ಜಾನಪದ ಗೀತೆಗಳು.**

ಪೌರಾಣಿಕ ಕ್ಷೇತ್ರವಾದ ಮೇಲುಕೋಟೆಯ ಚೆಲುವರಾಯಸ್ವಾಮಿ ಕುರಿತು ಹಳ್ಳಿಗರು ಹಾಡಿರುವ ಹಾಡುಗಳು.

**೨. ಆರಿಸಿದ ಹೂಗಳು** (ಜಾನಪದ ಗೀತೆಗಳ)

ಈ ಸಂಕಲನದಲ್ಲಿಯ ಒಂದೊಂದು ಆರಿಸಿದ ಹಾಡುಗಳು ಕೂಡ ಮಧುರವಾಗಿ ಇದ್ದು ರಸಿಕರ ಮನಸ್ಸನ್ನೂ ತಣಿಸುತವೆ.

ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗಳ
ಉದ್ಧಾರವೆ ನಾಡಿನ ಉದ್ಧಾರವೆಂದು ತಿಳಿದು
ಅವುಗಳ ಮೇಲ್ಮೆಗಾಗಿ ದುಡಿದ
ಮೈಸೂರಿನ ಜನಪ್ರಿಯ ಮಾಜಿ ಮುಖ್ಯಮಂತ್ರಿ
ಶ್ರೀ ಕೆ. ಹನುಮಂತಯ್ಯನವರಿಗೆ
ವಿಶ್ವಾಸಪೂರ್ಣ ಕಾಣಿಕೆ.

ಕ. ರಾ. ಕೃ.

ದಳ ೧

## ಪ್ರಾರ್ಥನೆ

ಹೊತ್ನಂತೆ ಎದ್ದು ಯಾರ್ಯಾರ ನೆನೆಯಾಲಿ
ಕಲ್ಲು ಕಾವೇರಿ ಕಪನೀಯ । ಬಸವಣ್ಣ
ಹೊತ್ನಂತೆ ಎದ್ದು ನೆನೆದ್ಹೇವು....॥

# ಸರಸ್ವತಿ

ತಾಯಿಯ ನೆನೆದಾರೆ ಬೇಗಾನೆ ಪದಬರಲಿ
ತಾಯವ್ನೆ ಗಂಗೆ ದಡದಲ್ಲಿ । ಸರಸ್ವತಿಯ
ಕಾಯಿ ಕುಂಡ್ಹೋಗಿ ಕರೆತನ್ನಿ....॥

ಅಕ್ಕಾನ ನೆನೆದಾರೆ ಗಕ್ಕಾನೆ ಪದಬರಲಿ
ಅಕ್ಕವ್ನೆ ಗಂಗೆ ದಡದಲ್ಲಿ । ಸರಸ್ವತಿಯ
ಅಕ್ಕಿ ಕುಂಡ್ಹೋಗಿ ಕರೆತನ್ನಿ....॥

ತಾಯಿ ಸರಸ್ವತಿ ಬಾಗ್ಲಲ್ಲಿ ಯಾಕುನಿಂದೆ
ತೋರ್ಥೀನು ಬ ರೇ ನಿನಗಿಂಬ । ನಮ್ಮಾನೆ
ಸಾಲು ಮಂಚಾವ ಒರಗಮ್ಮ....॥

ನೆನೆಯಕ್ಕಿ ನೆನಗಡಲೆ ನೆನೆಯ ಬಾಳೇಯ ಹಣ್ಣು
ಗುಡ್ಡೆ ಹೂಸೂವೆ ನಿನ ಮುಂದೆ। ಸರಸ್ವತಿಯೆ
ತುಂಬಮ್ಮ ನಮ್ಮ ಗಂಟಲಾನು....॥

ತಾಯಿ ಸರಸ್ವತಿ ನೆನ್ನೆಲ್ಲಿಗ್ಹೊದೇಯೆ
ಕೊಟ್ಟೇವು ಬಾರೇ ನಿನಗಿಂಬ । ರಾಯರಮನೆ
ಪಟ್ಟೆ ಮಂಚದ ಮೇಲೆ ಪಗಡೇಯು....॥

ಅಗ್ನಿಬುಡದಲ್ಲಿ ಸೊಗಸು ಮಾಡೊಹೆಣ್ಣೆ
ಅವಸರದಲ್ಲಿ ಬಂದೆ ನಿನಬಳಿಗೆ । ಸರಸ್ವತಿಯೆ
ನೀನು ಕೆಲಸ ಬಿಟ್ಬಾಡು ಕಲಿಸಮ್ಮ....॥

ಸಗ್ಗಾಲ ಮರದಡಿಯ ನಿದ್ರೆಮಾಡೋದ ಬಿಟ್ಟು
ಎಗ್ಗಿಲ್ದೆ ಬಂದೆ ನಿನ ಬಳಿಗೆ । ಸರಸ್ವತಿಯೆ
ನೀನು ಚೆಂದುಳ್ಳಿ ಹಾಡ ಕಲಿಸಮ್ಮ....॥

ಸರಸ್ವತಿ ಎಂಬೋಳು ವರುಷದಿಂದ ನೋಡೀರೆ
ಅರಿಷಣದ ಸೀರೆ ನೆರೆಯೋಳು । (ನೆರೆಯೋಳೆ) ಸರಸ್ವತಿಯೆ
ಹರುಷದಲಿ ನಿನ್ನ ನೆನೆದ್ದೀನು....॥

ಸರಸ್ವತಿ ಎಂಬೋಳು ಸರ್ವಕ್ಕೆ ದೊಡ್ಡೋಳು
ಸರವ ಹಾಕ್ಯವಳೆ ಐನೂರ । (ಐನೂರು) ವಜ್ರಾವ
ತಿರುವನ್ನೈ ಕುಣಿಕೆ ಕೊರಳಲ್ಲಿ....॥

ಹಳ್ಳಾ ಕೊಳ್ಳಾದಲ್ಲಿ ಮುಳ್ಳಾಜಿ ವನದಲ್ಲಿ
ಎಲ್ಲೆಲ್ಲೂ ನಿನ್ನ ಹರಸೀದೆ । ಸರಸ್ವತಿಯೆ
ನೀನು ಎಲ್ಲಿ ಹೋದಮ್ಮ, ನನಬಿಟ್ಟು....॥

ಎಲ್ಲಿಗ್ಹೋಗಲಿಲ್ಲಾ ಯಾತಕ್ಕೋಗಲಿಲ್ಲಾ
ಸಾಲು ಬೇಲೂರು ನವಿಲ್ಹೀಯ । ಗುಡಿಯ ಮುಂದೆ
ನಾನು ಲಾಲೀಸುತ್ತಿದ್ದೆ ಪದನೂರ....॥

ಅಟ್ಟ ಬಿಟ್ಟದಲ್ಲಿ ಪುಟ್ಟಾಜಿ ವನದಲ್ಲಿ
ಶಿಟ್ಟ್ಯಾಳಿ ನಿನ್ನ ಹರಸೀದೆ । ಸರಸ್ವತಿಯೆ
ನೀನು ಎಲ್ಲಿ ಹೋದಮ್ಮ ನನಬಿಟ್ಟು....॥

ಎಲ್ಲಿಗ್ಹೋಗಲಿಲ್ಲಾ ಯಾತಕ್ಹೋಗಲಿಲ್ಲಾ
ಚಿಕ್ಕ ಬೇಲೂರು ಮಳಿಗಲ್ಲಿ । (ಮಳಿಗೆ) ಗುಡಿಯ ಮುಂದೆ
ನಾನು ಚಿತ್ರಿಸುತ್ತಿದ್ದೆ ಪದನೂರ....॥

ಹಳ್ಳಾ ಕೊಳ್ಳಾದಲ್ಲಿ ಪುಟ್ಟಾಜಿ ವನದಲ್ಲಿ
ಎಲ್ಲೆಲ್ಲೂ ನಿನ್ನ ಹರಸೀದೆ । ಸರಸ್ವತಿಯೆ
ನೀ ಯಾತಕ್ಹೋಗಿದ್ದೆ ಹೇಳವ್ವ....॥

ಎಲ್ಲಿಗ್ಹೋಗಲಿಲ್ಲಾ ಯಾತಕ್ಹೋಗಲಿಲ್ಲಾ
ಮಂಡೇವ್ದ ಮಲ್ಲಿಗೆ ಮುಡಿದಿದ್ದೆ । ನನ ಗೆಳತಿ
ನಾನು ಹಾಡುತಲಿದ್ದೆ ಪದಗಳ....॥

## ಸರಸ್ವತಿ

ಮಲ್ಲಿಗ್ಹೂವಿನಲ್ಲಿ ಬಲ್ಲೋಳು ಸರಸ್ವತಿಯೆ
ಎಲ್ಲಿಗ್ಹೋದವ್ವ ನನಬಿಟ್ಟು....ಸರಸ್ವತಿಯೆ
ನೀನು ಎಲ್ಲಿಗ್ಹೋದವ್ವ ನನಬಿಟ್ಟು....॥

ಎಲ್ಲಿಗ್ಹೋಗಲಿಲ್ಲಾ ಯಾತಕ್ಹೋಗಲಿಲ್ಲಾ
ನಾಗಮಂಗಲದಯ್ಯ ಬರುತಾನೆ । (ಬಂದು) ನಾನು
ಅವ ಪಾದಕೊಪ್ಪಿಸೂವೆ ಪದಗಳ....॥

ಹಾದೀಯ ಮನೆಯೋಳೆ ಪಾದದುಂಗುರದೋಳೆ
ಗೋದೂವೆ ಸೀರೆ ನೆರಿಯೋಳೆ । ಸರಸ್ವತಿಯೆ
ನೀನು ಭೋದಿಸಮ್ಮಯ್ಯ ನಲ್ನುಡಿಯ....॥

ಹಟ್ಟೀಯ ಮನೆಯೋಳೆ ಪಟ್ಟೆದುಂಗುರದೋಳೆ
ಪಟ್ಟೇಯ ಸೀರೆ ನೆರಿಯೋಳೆ । ಸರಸ್ವತಿಯೆ
ನೀನು ನಾಲಿಗಕ್ಷರವ ನಿಲಿಸವ್ವ....॥

ಏಳೀಲೆ ಮಾವಿನ ತಾಳಿನಲ್ಲಿರುವೋಳೆ
ತಾಳಾದ ಗರತಿ ನಲಿಯೋಳೆ । (ನಲಿಯೊ) ಸರಸ್ವತಿಯೆ
ನೀನು ನಾಲಿಗಕ್ಷರವ ನಿಲಿಸವ್ವ....॥

ಎಂಟೇಲೆ ಮಾವಿನ ದಂಟಿನಲ್ಲಿರುವೋಳೆ
ಘಂಟೀಯ ಗತಿಗೆ ನಲಿಯೋಳೆ । (ನಲಿಯೊ)ಸರಸ್ವತಿಯೆ
ನೀನು ಗಂಟಲಿಗಕ್ಷರವ ನಿಲಿಸವ್ವ....॥

ಅಕ್ಕ ಸರಸ್ವತಿ ಚಿಕ್ಕೋನೆ ಬಿಸುವಣ್ಣ
ತಪ್ಪಾದೆ ನನಗೆ ಮತಿಕೊಡಿ । (ಯ ಬರೆಕೊಡಿ) ಸರಸ್ವತಿ
ನಿನಗೆ ಇಳ್ಳೇವು ಎರಡೆಲೆ ಒಳಲಂಚ....॥

ಚಂದ್ರಗಾವಿಯನುಟ್ಟು ಮಲ್ಲಿಗೆ ಹೂಮುಡಿದು
ಅಂದಾಲದೊಳಗೆ ಪಗಡೇಯಾ । ಆಡುವ
ರೆಂಬೆ ಸರಸ್ವತಿ ಕೊಡು ಮತಿಯ....॥

ಖಂಡ್ಗರಾಗಿ ಬೀಸಿ ಕಂಗೆಟ್ಟೆ ಸರಸ್ವತಿ
ಗಂಧ ತಂದಿವ್ನಿ ಧರಿಸಮ್ಮ । ಸರಸ್ವತಿಯೆ
ನಾನು ದಂಡೆ ತಂದಿವ್ನಿ ಮುಡಿಯಮ್ಮ....॥

ಬೀಸೆ ಕಲ್ಲೀಗೆ ತೋಳಾಡಿ ಬುಜವಾಡಿ
ನಾಗಾರ ಹೆಡೆಯಂಗೆ ನಡುವಾಡಿ । ಸರಸ್ವತಿಯೆ
ನಮ್ಮ ಜುಜವಾಡಿ ಕಯ್ಯಿ ನೊಂದಾವು....॥

ಬಿಟ್ಟು ಹೋದಾಳೆಂದು ಸಿಟ್ಟು ಮಾಡಲುಬೇಡ
ನಾನು ಮತ್ತೆ ರಾತ್ರೀಕೆ ಬರುತ್ತೀನಿ । ಸರಸ್ವತಿಯೆ
ರಾಗೀಯ ತಂದಾಗೆ ನಿನ್ನ ನೆನೆತ್ತೀನಿ....॥

ಈ ಕಲ್ಲು ಎಳೆದು ತೋಳೆಲ್ಲಾ ನೊಂದಾವು
ಸೂಸ್ತ್ರಾದ ಬೆರಳು ಸವೆದಾವು । ಸರಸ್ವತಿಯೆ
ನಾನು ಹೋಗಿ ಬರುತ್ತೀನಿ ಮಲಗಮ್ಮ....॥



# ಪ್ರಾರ್ಥನೆ

ಕೋಲು—ಕೋಲೆನ್ನ—ಕೋಲೆ
ಸುವ್ವನಾರಿ ಕಮಲೆ ಸುರು ಹೊನ್ನೆ—ಕೋಲೆ।
ಹೊತ್ನಂತೆ ಎದ್ದು ಯಾರ್ಯಾರ ನೆನೆಯಾಲಿ
ಕಲ್ಲು ಕಾವೇರಿ ಕಪನೀಯ—ಕೋಲೆ
ಕಲ್ಲು ಕಾವೇರಿ ಕಪನೀಯ—ಬಸವಣ್ಣ
ಹೊತ್ನಂತೆ ಎದ್ದು ನೆನೆದ್ದೇವು—ಕೋಲೆ....।
ಕೋಲು—ಕೋಲೆನ್ನ—ಕೋಲೆ
ಸುವ್ವನಾರಿ ಕಮಲೆ ಸುರುಹೊನ್ನೆ—ಕೋಲೆ।
ಆರು ಸಾವಿರಪದವ ಎತ್ತಿನ ಮೇಲ್ದೇರಿಕೊಂಡು
ಮತ್ತೆ ಸಾವಿರ ಕೈಲಿ ಇಡಿಕೊಂಡು—ಕೋಲೆ
ಎಂಟು ಸಾವಿರಪದವ ಒಂಟೆ ಮೇಲ್ದೇರಿಕೊಂಡು
ಎಂಟೂರು ಸುತ್ತಿ ಬರುತ್ತೀನಿ—ಕೋಲೆ—।
ಕೋಲು—ಕೋಲೆನ್ನ—ಕೋಲೆ
ಸುವ್ವನಾರಿ ಕಮಲೆ ಸುರುಹೊನ್ನೆ—ಕೋಲೆ।
ಹತ್ತುಸಾವಿರ ಪದವ ಹೋರಿ ಮೇಲ್ದೇರಿಕೊಂಡು
ಬಸವಣ್ಣ ಸಭೆಗೆ ಬಂದಿವ್ನಿ—ಕೋಲೆ
ಕೋಲೀನ ಮೇಲೊಬ್ಬ ಬಸವಣ್ಣ ಕೂತ್ಕೊಂಡು
ಲಾಲೀಸಿ ಪದವ ಬರೆಕೊಂಡ....।
ಕೋಲು—ಕೋಲೆನ್ನ—ಕೋಲೆ
ಸುವ್ವನಾರಿ ಕಮಲೆ ಸುರುಹೊನ್ನೆ—ಕೋಲೆ।
ಬಸವಣ್ಣ ಜಾತ್ರೀಲಿ ಏನ್ದೇನು ಪನಿವಾರ
ನೆನೆಯಕ್ಕಿ ನೆನಗಡಲೆ ಪನಿವಾರ—ಕೋಲೆ
ನೆನೆಯಕ್ಕಿ ನೆನಗಡಲೆ ಪನಿವಾರ ಮಾಡೋದ್ನೆ
ಬಸವಣ್ಣ ಸಭೆಗೆ ಬಂದಿವ್ನಿ—ಕೋಲೆ
ಕೋಲು—ಕೋಲೆನ್ನ—ಕೋಲೆ
ಸುವ್ವನಾರಿ ಕಮಲೆ ಸುರುಹೊನ್ನೆ—ಕೋಲೆ....।।

ಅವರಾಡಿ ಇವರಾಡಿ ತೋಳಾಡಿ ಭುಜವಾಡಿ
ನಾಗಾರ ಹೆಡೆಯಂತೆ ನಡುವಾಡಿ—ಕೋಲೆ
ನಾಗಾರ ಹೆಡೆಯಂತೆ ನಡುವಾಡಿ ನಮ್ಮಟ್ಟಿ
ನೀ ಬಾಡಿ ದಣಿದಲ್ಲೊ—ಕೋಲೆ
ಕೋಲು—ಕೋಲೆನ್ನ—ಕೋಲೆ
ಸುವ್ವನಾರಿ ಕಮಲೆ ಸುರುಹೊನ್ನೆ—ಕೋಲೆ ।
ದೊಡ್ಡಡ್ಡ ಪದಗಳ ದೊಡ್ಡ ಭರಣಿಗೆ ತುಂಬಿ
ಅಡಿವಾಣದ ಕೀಲು ಸಡಿಲಾವೆ—ಕೋಲೆ
ಅಡಿವಾಣದ ಕೀಲು ಸಡಿಲಾವೆ—ಈವೂರ
ದೊಡ್ಡವ್ಗೆ ಒಪ್ಪಿಸೆ ಪದಗಳ—ಕೋಲೆ
ಕೋಲು—ಕೋಲೆನ್ನ—ಕೋಲೆ
ಸುವ್ವನಾರಿ—ಕಮಲೆ ಸುರುಹೊನ್ನೆ—ಕೋಲೆ ।
ಚಿಕ್ಕಕ್ಕ ಪದಗಳ ಚಿಕ್ಕಭರಣೀಗೆ ತುಂಬಿ
ಚಿತ್ತರದ ಕೀಲು ಸಡಿಲಾವೆ—ಕೋಲೆ
ಚಿತ್ತರದ ಕೀಲು ಸಡಿಲಾವೆ । ಈವೂರ
ಚಿಕ್ಕವ್ಗೆ ಒಪ್ಪಿಸೆ ಪದಗಳ—ಕೋಲೆ ।
ಕೋಲು—ಕೋಲೆನ್ನ—ಕೋಲೆ
ಸುವ್ವನಾರಿ—ಕಮಲೆ ಸುರುಹೊನ್ನೆ—ಕೋಲೆ ।
ಹಣ್ಣುಕಾಯಿ ಹೆಡಿಗೆ ಹೆಗ್ಲಲ್ಲಿ ಹೊತ್ಕೊಂಡು
ಮತ್ತೆ ರಾತ್ರೀಕಿ ಬರುತ್ತೀನಿ—ಕೋಲೆ
ಕೋಲು ಬಿಡ್ತಾರೆಂದೂ ಕೋಪಮಾಡಲುಬೇಡ
ನಿನ್ನಾಣೆ ಕೋಲು ಬಿಡುತ್ತೀನಿ—ಕೋಲೆ
ನಿನ್ನಾಣೆ ಕೋಲು ಬಿಡುತ್ತೀನಿ—ಭೂಮಿತಾಯಿ
ನಾನು ಮತ್ತೆ ರಾತ್ರೀಕೆ ಬರುತ್ತೀನಿ—ಕೋಲೆ
ಕೋಲು—ಕೋಲೆನ್ನ—ಕೋಲೆ
ಸುವ್ವನಾರಿ ಕಮಲೆಸುರುಹೊನ್ನೆ—ಕೋಲೆ ।

# ಕೆಂಪವ್ನ ನೆನೆದು....

ಕನಸಿನಲ್ಲಿ ಕಂಡೆ ಮನಸ್ಸಿೀಗೆ ದೊಡ್ಡೋಳ
ತೊಳಿಸೀಯ ಮೂಲೆ ಒಳದಂಡೆ । ಕೆಂಪವ್ವ
ತಾಯಿ ಬಾರವ್ವ ಸ್ವಪ್ನಾಕೆ....॥

ನಾವು ಬೇಡಿದೋ ನಾವು ನಿನ್ನ ಮಗಳಾದೋ
ನಾಮದ ಕೆಳಗಾಲ ತೊಳಿಸೀಯ । (ತೊಳಿಸಿ) ತೀರ್ಥವ ಬೇಡಿ
ನಾವು ಕೆಂಪವ್ಗೆ ಮಕ್ಕಳಾದೋ....॥

ಹಿಡಿಹೊನ್ನು ಹಿಡಿಕೊಂಡು ಗುಡಿಸುತ್ತಾ ನಾವು ಬಂದೋ
ಸುವ್ವಾರಿ ಕೆಂಪವ್ನ ಸುಳಿವಿಲ್ಲಾ । ದ್ವನಿಯಿಲ್ಲಾ
ನಾವು ಹಿಡಿ ಹೊನ್ನು ಕೊಟ್ಟೇವು ಮಡಿಲೊಡ್ಡಿ....॥

ಕಾಯೊಂದು ಕೈಯಾಗೆ ಹೂವೊಂದು ಮಡಿಲಾಗೆ
ಸೇವಂತಿಗ್ಹೂವೊಂದು ಸೆರಗಾಡೆ । ಕೆಂಪವ್ವ
ನೀರೊತ್ತಳಿಂದು ನಾನು ಮರೆಬಿದ್ದೊ....॥

ಗಾಳಿಗಂಟಾಕಿ ನೀರು ಮಟ್ಟಿಯಕಟ್ಟಿ
ಸಾಯೂವ ಹೆಣವ ಕಲಿಮಾಡಿ । ಕಲ್ಯಾಣಿಗ್ಹೋಗಿ
ಗೆದ್ದನೆಂದು ಕಾಳೆ ಹಿಡಿದಾಳು....॥

ಸಾವಿರ ಸಣ್ಣಕ್ಕಿ ಎಣ್ಣೆ ಮುಗಂಡೂಗ
ಹಣ್ಣೀಗೆ ಗೂಡೆ ಹದಿನಾರು । ಕೆಂಪವ್ವ
ನಾನು ಬಡವೆ ಬಂದಿವ್ನಿ ದಯಮಾಡೆ....॥

ಹಸಿಯಡಕೆ ಕುಸಿಮಂಚ ದಿಸರಿಮೇಲೆ ಕಟ್ಟಿ
ಮಸರೀನ ಬಾವಿ ಗುಡಿಮುಂದೆ । ಕೆಂಪವ್ವ
ನಿಶ್ರೆವ್ವಾಲಾಡಿ ಬೆಳೆದಾಳು....॥

ಹಾಲೀನ ಅರಬೀಯ ತಲೆಮೇಲೆ
ಭಾಗ್ಯವ ನೀಡಿ ಬಾಲಾರ ಕೊಡೆ ಮನೆತುಂಬ । ಕೆಂಪಪ್ಪ
ನಿನ್ನ ಬಾಗೀಲ ರಜವ ಹೊಡೆದ್ಧೇವು....॥

ತುಪ್ಪದರಬೀಯ ಕೊಡೆ ಮತ್ತೆ ಭಾಗ್ಯೇವಕೊಡೆ
ನೀನು ಪುತ್ರಾರ ಕೊಡೆ ಮನೆತುಂಬ । ಕೆಂಪಪ್ಪ
ನಿನ್ನಟ್ಟೀಯ ರಜವ ಹೊಡೆದ್ಧೇನು....॥

ಹೊಸಿಲು ಚಿಕ್ಕದು ಕುಸಿದು ಬಾರೇಕೆಂಪಪ್ಪ
ಆಸೆವಂತ ಕಾಣೆ ನಿನಮಗ । ಕೆಂಪಪ್ಪ
ನಾನು ಹೊಸಲ್ಗೀಗೆ ಮುತ್ತು ಬಿಗಿಸ್ಥೇನು....॥

ಬಾಗೀಲು ಚಿಕ್ಕವಾದೊ ಬಗ್ಗಿ ಬಾರೇ ಕೆಂಪಪ್ಪ
ಭಾಗ್ಯವುಳ್ಳೋನು ನಿನಮಗ । ಕಂದಯ್ಯ
ನಿನ್ನ ಬಾಗಿಲ್ಗೀಗೆ ಚಿತ್ತಾರ ಕಡೆಸ್ಥೇನು....॥

ಅರಗೀನ ಹೊಲದಲ್ಲಿ ಮುರುಗಾವ ಕುಯ್ಯೋಳಿ
ಅರುಳಾಕಿದ್ಧೋಲೆ ಕಿವಿಯೋಳಿ । ಕೆಂಪಪ್ಪ
ಅರುಳು ಬಂದಾವೆ ನೀನು ಬೆಲೆಮಾಡೆ....॥

ಉತ್ತಹೊಲದಲ್ಲಿ ಪತ್ತಿರ್ಧೀಯ ಕುಯ್ಯೋಳಿ
ಮುತ್ತಾಕಿದ್ಧೋಲೆ ಕಿವಿಯೋಳಿ । ಕೆಂಪಪ್ಪ
ಮುತ್ತು ಬಂದಾವೆ ನೀನು ಬೆಲೆಮಾಡೆ....॥

ಊರು ದೊಡ್ಡದೆಂದು ಬೀದಿ ಚಿಕ್ಕದೆಂದೂ
ಯಾಕೆ ಕೆಂಪಪ್ಪ ಮುನಿವಲ್ಲೆ । ಗೌಡಗಳಿರಾ
ನೀವು ಬಿಡಿರಯ್ಯ ಬೀದಿ ಚೌಕಾವ....॥

ಬಿಡಿರಯ್ಯ ಬೀದಿ ಚೌಕಾವ....ನಾಲ್ಕುಮೂಲೆ
ಬಂದೋಳು ಬೀದಿ ಒಳಗೆಲ್ಲಾ....॥

### ಕೆಂಪವ್ವ ನೆನೆದು...

ಗಂಧ ಘಮ್ಮೆಂದೋ ಬಂದಿದ್ದರ್ಯಾರಮ್ಮ
ಗಂಧಾದ ಭರಣಿ ಬಲಗೈಲಿ । ಹಿಡಿಕೊಂಡು
ಬಂದ್ಹೋಳು ಈ ಬೀದಿ ಒಳಗೆಲ್ಲಾ....॥

ಸಾರು ಘಮ್ಮೆಂದೋ ಸಾರೀದೊರ್ಯಾರಮ್ಮ
ಸಾಧೀನ ಭರಣಿ ಬಲಗೈಲಿ । ಹಿಡಿಕೊಂಡು
ಬಂದ್ಹೋಳು ಈ ಬೀದಿ ಒಳಗೆಲ್ಲಾ....॥

ಬೇವಿನ ಮರದ ಮೇಲೆ ಬೆಳಕು ಮಾಡಿದವಳ್ಯಾರೆ
ಗುಬ್ಬಿಚಿಂತಾಕೀನ ಕೊರಳೋಳು । ಕೆಂಪವ್ವ
ಬೆಳಕು ಮಾಡ್ಯವಳೆ ಪರುಷ್ಹೀಗೆ....॥

ಆಕಂಬಿಸೀರೆ ನೇಕೆಮೇಲಾಕ್ಯಾಳೆ
ಯಾಕೆ ಕೆಂಪವ್ವ ಉಡುವಲ್ಲೆ । ಮೈಸೂರ
ಮೊಗ್ಗು ಬಂದಾವೆ ಸೆರಗೀಗೆ....॥

ಆಕಂಬಿಸೀರೆ ಜ್ವಾಲೆ ಮೇಲಾಕ್ಯಾಳೆ
ಯಾಕೆ ಕೆಂಪವ್ವ ಉಡುವಲ್ಲೆ । ಬೆಂಗಳೂರ
ಹೂವು ಬಂದಾವೆ ಸೆರಗೀಗೆ....॥

ಬಾಳೆ ಹಣ್ಣೀಗೆ ಹೋಗಿ ಹನ್ನೆರಡು ದಿನವಾದೋ
ರೆಂಬೆ ನಿನ ಮಗಬರಲಿಲ್ಲಾ । ಕೆಂಪವ್ವ
ಪೂಜೀಗೆ ಹೊಂಬಾಳೆ ತರುತಾನೆ....॥

ಕಾಸೀನ ಹೊಂಬಾಳೆ ಸಾಕೇನೆ ಕೆಂಪವ್ವ
ಲೋಕದೊಂಬಾಳೆ ಸುಖೀಬಾಳೆ । ಪೂಜಾರಿ
ಬೀಸಯ್ಯ ಬೆಳ್ಳಿ ಚವಲಾವ....॥

ಮೊಗ್ಗೀನ ತೋಟಾಕೆ ನುಗ್ಗಿದ್ದಾಳೆ ಕೆಂಪವ್ವ
ಮೊಗ್ಗೆಲ್ಲಾ ನುಗ್ಗೆ ನುರಿಯಾದೋ । ಕೆಂಪವ್ವ
ನಿನ್ ಪೂಜೆ ಹೊತ್ತೀಗೆ ಹಸನಾದೋ....॥

ಕೆಂಪವ್ನ ಗುಡಿಸುತ್ತ ಘಮ್ಮನ್ನದೇ ನಿರಯ್ಯ
ಗಂಡು ಭೂತಾಳಿ ಗಜನಿಂಬೆ । ಮರದಡಿಯ
ಕಳ್ಳರು ಕುಯ್ವಾಗ ಕಸಿಕಾಯಿ....॥

ಕಳ್ಳರು ಕುಯ್ವಾಗ ಕಸಿಕಾಯಿ....ಕೆಂಪವ್ವ
ನೀನು ಕುಯ್ವಾಗ ಗಜನಿಂಬೆ....ಕೆಂಪವ್ವ
ನೀನು ಕುಯ್ವಾಗ ಗಜನಿಂಬೆ....॥

ಕೆಂಪವ್ನ ಗುಡಿಸುತ್ತಾ ಹಿಂಡೆಮ್ಮೆ ಮೆಯ್ತಾವೆ
ಹಂಡ್ಹೇಲಿ ಹಾಲ ಕರೆಯೋಳೆ । ಕೆಂಪವ್ವ
ನಿನ್ ಕೊಳತುಂಬಿ ಕೋಡಿ ಹರಿದಾವೆ....॥

ಕೆಂಪವ್ನ ಗುಡಿಸುತ್ತಾ ಎಳೆಯ ತೆಂಗಿನಮರ
ಕಂಬಿಕಂಬೀಗೆ ಎಳೆಕಾಯಿ । ಕೆಂಪವ್ವ
ನಿನ್ ಪೂಜೆ ಹೊತ್ತೀಗೆ ಹೊಡಿಕಾಯಿ....॥

ಹೊಡಿಕಾಯಿ ಹೊಡಿಸ್ಥೇವು ಹಿಡಿಕಾಯಿ ಹಿಡಿಸ್ಥೇವು
ಎಳೆನೀರ್ಹೀನ ಕೋಡಿ ಹರಿಸ್ಥೇವು....ನಾವು
ಎಳೆನೀರ್ಹೀನ ಕೋಡಿ ಹರಿಸ್ಥೇವು....॥

ಏರಿ ಹತ್ಯಾಳೆ ನೀರಾಳ ನೋಡ್ಯಾಳೆ
ಏರೀಗೂ ನೀರೀಗೂ ಸಮನೆಂದೂ । ಕೆಂಪವ್ವ
ಏರ್ಯಾಳೆ ನೀಲ ಕುದುರ್ಹೀಯಾ....॥

ಗಂಗೆ ದಡದಲ್ಲಿ ಲಿಂಗಾವ ಪೂಜೆಮಾಡಿ
ಜಂಗುಮರ ನಡುವೆ ಬರುವೋಳೆ । ಕೆಂಪವ್ವ
ನಿನ್‌ಲಿಂಗ ಹೊಳೆದಾವು ಬಿಸಲ್ಹೀಗೆ....॥

ಪಿಲ್ಲಿ ಕಾಲಿನ್ಹೋಳೆ ಚೆಲ್ಲೀದ ನಂಗ್ಹೋಳೆ
ಕಲ್ಲು ಮೇಲೆ ಕಾಲ ತೊಳೆಯೋಳೆ । (ತೊಳೆಯೊ) ಕೆಂಪವ್ವ
ನಿನ್‌ಪಿಲ್ಲಿ ಸಾಪಿರಕೆ ಬೆಲೆಯಾದೊ....॥

ಮೂಗೂತಿ ಮುಂಭಾರ ಹೆಣೆಗೆಂಟೆಸಿಂಭಾರ
ಸಣ್ಣ ಹರುಳೀನ ವಾಲೆಕಿವಿಭಾರ । ಕೆಂಪವ್ವ
ನಿನ್ನ ದೊಡ್ಡಗುಂಡೀನಸರ ಎದೆಭಾರ....॥

ಚೆಂದುಳ್ಳಿ ಕೆಂಪವ್ವ ಗಂಧಾದ ಬಟ್ಟಲಿಡಿಕೊಂಡು
ಬಂಧೀ ಮುಂದಾಕೆ ರವಕೇಯ । ತೊಟ್ಟುಕೊಂಡು
ಬಂದಿವ್ನಿ ನಿನ್ನ ಕನಸ್ಹೀಗೆ....॥

ಇದೆ ಆಗ್ರಾರದಲ್ಲಿ ಇರುವ್ರೋಳೆ ಕೆಂಪವ್ವ
ಬರುತಾಳೆ ನನ್ನ ಸ್ವಪ್ನಾಕೆ । ಕೆಂಪವ್ವ
ಅವಳೀಗೆ ಹಬ್ಬ ಮಾಡ್ಡೀವು ನನ್ನ ತವರಲ್ಲಿ....॥

ಸಣ್ಣ ಸೀರ್ಹೀಗೆ ಚಿನ್ನಾದ ಗೊಂಡ್ಹೀವು
ಸಣ್ಣ ಚಿತ್ತಾವ ಕೈಲಿಡಿದು । ಕೆಂಪವ್ವ
ಸೊನ್ನಾಗಿ ನಡೆಗೆ ನಡೆದಾಳೆ....॥

ಪುಟ್ಟ ಸೀರಿಗೆ ಪಟ್ಟೆನೂಲುಗೊಂಡ್ಹೀವು
ಪುಟ್ಟಾಣಿ ಚಿತ್ರ ಕೈಲಿಡಿದು । ಕೆಂಪವ್ವ
ಚಿತ್ತರದ ನಡೆಗೆ ನಡೆದಾಳು....॥

ನೀರಿಲ್ಲ ಕೆರೆಯಲ್ಲಿ ಬೇರಿಲ್ಲ ಮರವುಟ್ಟ
ನಾರಿಲ್ಲದ ಹೂವ ಮುಡಿಯೋಳೆ । (ಮುಡಿಯೊ) ಕೆಂಪವ್ವ
ಕೊರಳಲ್ಲಿ ದಾರ ಮುತ್ತು ಜಡಿವ್ಹೇನೆ....॥

ಉತ್ತುಮರ ಅಟ್ಟೆಯ ಮುತ್ತೀನ ಜಗಲ್ಹೀಯುಮೇಲಿ
ಕುಂತು ಅರಿಷಾಣ ಅರಿಯೋಳೆ । ಕೆಂಪವ್ವ
ಹಬ್ಬವ್ಹೇನೆ ನಿನ್ನ ತವರಲ್ಲಿ....॥

ಹಾರುವರ ಅಟ್ಟೆಯ ಗಾರೆ ಜಗಲಿಯ ಮೇಲಿ
ಆಡಿ ಅರಿಷಣವ ಅರಿಯೋಳೆ । ಕೆಂಪವ್ವ
ಪರುಷ್ಹೇನೆ ನಿನ್ನ ತವರಲ್ಲಿ....॥

ಕಣಕಪ್ಪಿನ ಸೀರೆ ಕನಕಾಲೀಗೆ ಅರಿಷಾಣ
ಕೆಣಕದಿರವಳು ಕಿಡಿಗಣ್ಣೆ । ಕೆಂಪವ್ವ
ನೀನು ಕೆಣಕದೀರು ಕಿಡಿಗಣ್ಣೇನೋಳ....॥

ಹೊಸಲು ಚಿಕ್ಕದು ಉಸ್ತು ಬಾರೇ ಕೆಂಪವ್ವ
ಭಾಗ್ಯವುಳ್ಳೋನು ನಿನಮುಗ । ಸಾದಾರೆ
ನಿನ್ನವಾಲಿಗೊಜ್ಜುರವ ಬಿಗಿಸ್ತೇನು....॥

ಸಾರೀಸದ ಮನೆಯಲ್ಲಿ ಸಾಂಬ್ರಾಣಿ ಘಮ್ಮೆಂದೊ
ಯಾರುಂಡರು ನಿಮ್ಮಮನೆಯಲ್ಲಿ । ಮೂಡಲನಾಡ
ತಾಯುಂಡಳು ಬಾಳೆ ಎಲೆಮ್ಯೇಲೆ....॥

ಎಂಟೆಂಟು ದಿನಕೆ ಉಂಟೇನೆ ಮಂಗಳವಾರ
ಎಂಟೆಮ್ಮೆ ಕರೆದ ನೊರೆಹಾಲು ।(ನೊರೆಹಾಲ)ಗಿಣ್ಣುಮಾಡಿ
ಬಂಟ ಕಂದರಿಗೆ ತಳಿಗಾದೋ....॥

ಏರಿಮ್ಯೇಲೆ ನಿಂತು ಯಾರನೋಡಿ ಕೆಂಪವ್ವ
ದೂರ ಹೋಗ್ಯವನೆ ನಿನಮುಗ । ಕೆಂಪವ್ವ
ನಿನ್ನ ತೇರ್ಹಿಗೆ ಹೊಂಬಾಳೆ ತರುವ್ಯೋಕೆ....॥

ಏಳೆ ಕೆಂಪವ್ವ ಏಳೆ ಮದ್ಯಾನವಾದೊ
ದಾಳಿಂಬೆ ದಸುರಿ ದನಮ್ಯೇದೊ । ಕೆಂಪವ್ವ
ನಿನ್ನ ಉಯ್ಯಾಲೆನ್ಹೀರೊ ಕರುವುಂಡೊ....॥

ಊರೀಗೆ ದನಬಂದೋ ಹೂವಿನುಂಡೆ ಕೊಳ್ಳಿರಮ್ಮ
ನೀವು ಕೂಡಿರುವ ಕರುವ ಬಿಡಿರಮ್ಮ । ಕೆಂಪನ್ಗೆ
ತಳಿಗ್ಹೀಗೆ ಮಸರ ಕೊಡಬೇಕು....॥

ಬೀದೀಲಿ ದನ ಬಂದೋ ಮುತ್ತಿನುಂಡೆ ಕೊಳ್ಳಿರಮ್ಮ
ಕಟ್ಟಿರುವ ಕರುವ ಬಿಡಿರಮ್ಮ । ಕೆಂಪನ್ಗೆ
ತಳಿಗ್ಹೀಗೆ ಹಾಲ ಕೊಡಬೇಕು....॥

ಕೆಂಪವ್ವ ನೆನೆದು...

ಬಾವಿ ನೀರ್ಹಿಗೂ ಬಟ್ಟನ್ನೆ ಕಲ್ಲೀಗೂ
ಜುಳು ಜುಳುನೆ ಕಾಯೊ ಬಿಸಿಲೀಗೆ । ಕೆಂಪವ್ವ
ನಿನ್ ಮಾರುದ್ದ ಮಂಡೆ ಮಡಿಯಾದೊ....॥

ಕಟ್ಟನೀರ್ಹಿಗೊ ಬಟ್ಟನ್ನೆ ಕಲ್ಲೀಗೂ
ಕಟ ಕಟನೆ ಕಾಯೊ ಬಿಸಲೀಗೆ । ಕೆಂಪವ್ವ
ನಿನ್ ಪಟ್ಟೆ ಸೀರೆಯೆಲ್ಲಾ ಮಡಿಯಾದೋ....॥

ನಿಲ್ಲೆ ಕೆಂಪವ್ವ ನಿನ್ನ ಪಿಲ್ಲೀಯು ನೋಡ್ಡೇನು
ಪಿಲ್ಲಿ ಮೇಗಾಲ ಬಸವಾನ । ನೋಡ್ಹೋನು
ನಿಲ್ಲವ್ವ ನೀರ ಹೊಳೆಯಲ್ಲಿ....॥

ತಾಳೆ ಕೆಂಪವ್ವ ನಿನ್ನ ತಾತ್ಹೀಯ ನೋಡ್ಡೇನು
ನಿನ್ನ ತಾಲಿಮೇಗಾಲ ಗಿಡುಗಾನ । ನೋಡ್ಹೋನು
ನೀನು ನಿಲ್ಲವ್ವನಿಲ್ಲೆ ಜಲದಲ್ಲಿ....॥

ನಾಲ್ಕಾಳು ಹೊತ್ತರೆ ನೋಡಲಿಲ್ಲಾ ಕೆಂಪವ್ವ
ನಾಲ್ಕಾಳಿನೊಳಗೆ ಹಿರಿಯಣ್ಣ । ಹೊತ್ತರೆ
ನಾ ಒಪ್ಪೀದೆ ಮಗನೆ ಮನೆಯಲ್ಲಿ....॥

ಗಂಡು ಮಕ್ಕಳು ಬನ್ನಿ ಗಂಧಾವ ಇಡು ಬನ್ನಿ
ನೀವು ದುಂಡು ಮಲ್ಲಿಗೆಯ ಮುಡಿಬನ್ನಿ । ಕೆಂಪವ್ವ
ಮುಂದಾಲೋನಾವ ಹೊರು ಬನ್ನಿ....॥

ಹೆಣ್ಣು ಮಕ್ಕಳು ಬನ್ನಿ ಬಣ್ಣಾವ ಉಡುಬನ್ನಿ
ಜಾಜೀ ಮಲ್ಲಿಗೆಯ ಮುಡಿಬನ್ನಿ । ಕೆಂಪವ್ವ
ಹೊನ್ನೀನ ಕಳಸ ಇಡಿಬನ್ನಿ....॥

ಬೇಡಿಕೊಳ್ಳೆ ಮಗಳೆ ಬೆಳ್ಳಿ ಕಣ್ಣಿನ್ಹೋಳ
ಬೆಳ್ಳೀಯ ಗಂಟೆ ತ್ರಿಶೂಲ । ಕೊಡುತ್ತಿನೆಂದೂ
ನೀನು ಬೇಡಿಕೊಳ್ಳೆ ಗಂಡು ಮಗದೀರಾ....॥

ಆರಬಿ ಹಣಕೊಡೆ ಮೇಲೆ ಭಾಗ್ಯಪಕೊಡೆ
ಪುತ್ರಾರ ಕೊಡೆ ಮನೆತುಂಬ....ಕೆಂಪಪ್ಪ
ನೀನು ಪುತ್ರಾರ ಕೊಡೆ ಮನೆತುಂಬ....॥

ಬಿಂದಿಗೆ ಹಣಕೊಡೆ ಹೊನ್ನು ಭಾಗ್ಯವಕೊಡೆ
ಬಾಲೇರ ಕೊಡೆ ಮನೆತುಂಬ । ಕೆಂಪಪ್ಪ
ನಿನ್ನ ಬಾಗೀಲ ರಜವ ಹೊಡೆದ್ವೇನು....॥

ಅರಸಿ ಹಬ್ಬಾಕೆ ಗೆರಸೀಲಿ ಹೂವುಬಂದೋ
ವರುಷಾಕೆ ನೂರು ಮಡೆ ಹೊರಟೊ । ಕೆಂಪಪ್ಪ
ಅರಸಿ ನಿನ್ನಹಬ್ಬ ಐಭೋಗ....॥

ಅರಿಕೆ ಹನ್ನೆರಡೊರುಷ ಗುಡಿಗೆ ಚಿನ್ನಾದ ಕಳಸ
ಮಾಲೆ ಕಟ್ಟೆಸೂವೆ ಮಲಪೀನ । ಕೆಂಪಪ್ಪ
ನಿನಗೆ ತೇರ ಕಟ್ಟೆಸೂವೆ ಗುಡಿಮುಂದೆ....॥

ಕನ್ನೆಕೆಂಪನ್ನ ಕಣ್ಣು ಕಡಿದವರ್ಯಾರೆ
ಕನ್ನಂಬಾಡೀಯ ವರ್ತಿಕರು । ಕೆಂಪನ್ನ
ಕಣ್ಣೀನ ಭಾವಾವ ಕಡೆದ್ದೋರು....॥

ಕನ್ನೆ ಕೆಂಪನ್ನ ಕಣ್ಣೆನುಬ್ಬಿನ ಮೇಲೆ
ಎಣ್ಣೇಯು ಬಾವಿ ಎಲೆದೋಟ । ಕೆಂಪಪ್ಪ
ಹಣ್ಣುವ್ವಾಲಾಡಿ ಬೆಳೆವಾವೆ....॥

ಕಡಿಯೊ ಕೋಣಾನ ಕಡಿಯೊ
ಕಂಬಾಕೆ ಕಟ್ಟೆ ಎಲ್ಲಿಗ್ಹೋಗಿದ್ದೆ ಶ್ರೀದೇವಿ । ಕೆಂಪಪ್ಪ
ನೀನು ಎಲ್ಲಿಗ್ಹೋಗಿದ್ದೆ ಶ್ರೀದೇವಿ....॥

ಹಳ್ಳೀಯು ಮೇಲೆ ಮಡಲಕ್ಕಿ । ಅಚ್ಚಿನಬೆಲ್ಲ
ಅಲ್ಲಿ ಕೆಂಪನ್ಗೆ ತಳಿಗಾದೋ....
ಅಲ್ಲಿ ಕೆಂಪನ್ಗೆ ತಳಿಗಾದೋ....

## ಕೆಂಪವ್ನ ನೆನೆದು...

ಬೀದಿಲ್ಯಾಡೀದೆ ಬಿಲ್ಲೂರಿ ಆವತಾರ
ಬೀದಿ ಮಕ್ಕ್ಯಾಳು ಬೆದರ್ತ್ಹೀವು । ಕೆಂಪವ್ವ
ನೀನು ತಪ್ಪಾಳೆನ್ಹಾಕಿ ಕರೆಕೊಳ್ಳೆ....॥

ಹರಿದಾಡೋ ಸರ್ಪಾನ ಮುರಿದು ಶಿವನಮಾಡಿ
ಎತ್ತ್ಯಾಳೆ ಹಾಲೀನ ಅರಬೀಯ । ಕೆಂಪವ್ವ
ಕನ್ನೀರು ಮಜ್ಜನಕೆ ಹೊರಟಾರು....॥

ಕನ್ನೆ ಕೆಂಪವ್ನ ಕಣ್ಣಿನುಬ್ಬಿನ ಮೇಲಿ
ಎಣ್ಣೀಯ ಬಾವಿ ಎಲೆತೋಟ । ದಾಳಿಂಬಿ
ಹಣ್ಣು ವ್ವಾಲಾಡಿ ಬೆಳೆದಾವೆ....॥

ಊರೀಗೆ ದನಬಂದೊ ಹೂವಿನುಂಡೆ ಕೊಡಿರಮ್ಮ
ನೀವು ಕಟ್ಟಿರುವ ಕರುವ ಬಿಡಿರಮ್ಮ । ಕೆಂಪವ್ಗೆ
ತಳಿಗ್ಹೀಲಿ ಹಾಲು ಕರೆದ್ಹೀನು....॥

ನೆನ್ನೆ ಮಾಡಿದನಲ್ಲೆ ನಿನ್ನುದ್ದ ಸರದೆಳೆಯಾ
ಇನ್ನೇನು ಬೇಕು ಕೆಂಪವ್ವ । ಬಂಗಾರ
ಸಿಗದೊಂದು ಬಣ್ಣ ಚಿಕ್ಕದೊಂದು....॥

ವ್ವಾಲಾಡಿ ವ್ವಾಲಾಡಿ ವಾಲೇಯ ಕಿವಿನೊಂದೊ
ಮೇಲೆ ರುದ್ರಾಕ್ಷಿ ಗರಿನೊಂದೊ । ಕೆಂಪವ್ವ
ನೀನೆನ್ದೆ ಮಳೆಯ ದೆಸೆಯಿಂದಾ....॥

ಹಾಗಾಲವಾಡಿಯಿಂದಾ ಸೀರೇವ್ದ ಸೀಮೆಯಿಂದಾ
ಯಾವಾಗ ಬಂದೊ ಮಳೆರಾಯ । ಕೆಂಪವ್ನ
ವಾಲೇಯ ಮೇಲೆ ಹನಿಬಿಡ್ದೊ....॥

ಹಾರು ತೋಟದ ಗಿರು ಪೊಳ್ಳೀಗೆ
ಇರಿಯ ನಾಗರದ ಗರತ್ಹೀಗೆ । (ಗರತಿ) ಕೆಂಪವ್ವಾಗೆ
ಆರು ತೋಟವ್ವ ಐನೂರು....॥

## ಮಲ್ಲಿಗೆ ನಗುತಾವೆ

ಆಕಾಶದಿಂದ ದೂಪಾದ ಹೊಗೆ ಹೊಂಟೊ
ಹಾಕೀರಿ ಕೆಂಪವ್ವ ಗುಡಿಮುಂದೆ । ನಮಗೆ
ರೇಖೆ ಚಿತ್ತರದ ಮರೆಯುಂಟೆ....॥

ಬಂಡಿಬಂದೊ ಬಂಡಿ ಕೊಂಡಾಕೆ ಬಂದೊ ಸೌದೆ ಬಂದೊ
ಕೊಂಡನ್ನಾಕೀರಿ ಮಗಬಂದಾ । ಕೆಂಪವ್ವ
ನೀ ಕೊಂಡಾಕೆ ಅಪ್ಪಣೆ ಕೊಡುಬಾರೇ....॥

ಹಸಿಯ ಬೇವಿನ ಸೌದೆ ರಸವಾಗಿ ಬೆಯ್ವ್ಯಾಗ
ಹಸುಮಗ ಕೊಂಡ ಹಾಯ್ವ್ಯಾಗ । ಕೆಂಪವ್ವ
ಅವಳು ಹುಸಿನಗೆ ನಗುತ ಹೊರಟಾಳು....॥

ಊರೀಗೆ ದನಬಂದೊ ಉಟ್ಟುಕೊಳ್ಳ ಬಣ್ಣಾವ
ತೊಟ್ಟುಕೊಳ್ಳೆ ಸಣ್ಣ ರವಿಕೇಯು । ಕೆಂಪವ್ವ
ಹೊತ್ತುಕೊಳ್ಳೆ ಹೊನ್ನ ಕಳಸಾವ....॥

ಹೆಣ್ಣು ಮಕ್ಕಳು ಬನ್ನಿ ಬಣ್ಣಾನ ಉಡುಬನ್ನಿ
ಸಣ್ಣ ಮಲ್ಲಿಗೆ ಮುಡಿ ಬನ್ನಿ । ಕೆಂಪವ್ವ
ಕೊಂಡಾದ ಮುಂದೆ ಕುಣಿಬನ್ನಿ....॥

ಬಂಡಿ ಕಾಣೆಬಂಡಿ ಚಿನ್ನಾದ ಬಂಡಿ
ಬಂಡಿಯು ಮೇಲೆ ರಥನ್ನೇರಿ । ಕೆಂಪವ್ವ
ಅವಳು ದಂಡು ನೆಡಿಸ್ಯಾಳೆ ಶಿವನ್ನೀಗೆ....॥

ದಂಡಿನಲ್ಲಿ ಬಿಟ್ಟ್ಯಾಳೆ ಡಂಗೂರ ಹೊಡೆದಾಳೆ
ಹಿಂಡು ಪರುಷಲ್ಲಿ ತಳಿಗ್ಯಾಳೆ । ಕೆಂಪವ್ವ
ಅವಳಿನ್ನೊಂದು ಯೋಜನವ ನಡೆದಾಳೆ....॥

ಏಳು ಮದ್ಯಾನದಿ ಎದ್ದು ಬಾರೆ ಕೆಂಪವ್ವ
ನೀ ದಾಳಿಂಬೆ ದಸುರಿ ದನವೋದೊ । ಕೆಂಪವ್ವ
ನಿನ್ ಹಾಲುಳ್ಳ ಹಸುವ ಕರುವುಂಡೊ....॥

## ಕೆಂಪವ್ನ ನೆನೆದು...

ಮರೆತಾರೆ ಮನೆಯೊಳ ಈ ಬಾರಿ ಬೆವರಾವ
ಬೆವರಾವ ಹೊಡದಾರೆ । ಕೆಂಪವ್ವ
ನಾವು ಮಾಡಿಸ್ತೇವು ಬೆಳ್ಳಿ ಹಲಗ್ಗೇಯ....॥

ಚಂದುಳ್ಳಿ ಕೆಂಪವ್ವ ಗಂಧಾದ ಬಟ್ಟಲಿಡಿಕೊಂಡು
ಬಂಧೀ ಮುಂದಾಕೆ ರವಕೇಯ । ತೊಟ್ಟುಕೊಂಡು
ಬಂದಿವ್ನಿ ನಿನ್ನ ಕನಸ್ಸೀಗೆ....॥

ನೆನ್ನೆ ತರಿಸಿದನಲ್ಲೆ ನಿನ್ನುದ್ದ ಚಿನ್ನಾವ
ನಮ ಕನಸ್ಸೀಗೆ ಇನ್ಯಾಕೆ ಬರುತ್ತೀಯೆ । ಕೆಂಪವ್ವ
ನೀನು ನಮ ಕನಸ್ಸೀಗೆ ಇನ್ಯಾಕೆ ಬರುತ್ತೀಯೆ....॥

ಮುತ್ತೀನ ಮೊಗ್ಗುಳ್ಳಮೊಗ್ಗು ಜಾಜೀಯ ಮೊಗ್ಗು
ಮದ್ದೂರ ಸಿನ್ಹೀಯ ಜವಳೀಯ ತಂದಿವ್ನಿ । ಕೆಂಪವ್ವ
ನೀನು ಮದ್ದೂರ ಸೀರೆ ಉಡುಬಾರೇ....॥

ಹಟ್ಟಲ್ಲಿ ದನ ಬಂದೊ ಮುತ್ತೀನ ಬಂಗಾರ
ಹನಿಯೊಂದು ಹೊನ್ನೀನ ತಾಲಿ ಕಿರುದೊಂದು । ಕೆಂಪವ್ವ
ಹೆಣ್ಣು ಮಕ್ಕಳ ಮೇಲೆ ಮುನಿದಾಳೆ....॥

ತಾವರೆ ತುರುಬೀಗೆ ಬಿಸಿಲೆಂದು ಕೆಂಪವ್ವ
ತಾ ಹೊರಬಾಳೆ ಚೆನ್ನಂಗಿಎಂಬ ದುರುಗಾಕೆ। ಕೆಂಪವ್ವ
ತಾ ಹೊರಟಾಳೆ ಚೆನ್ನಂಗಿಎಂಬ ದುರುಗಾಕೆ....॥

ಮಂಗಳ್ವಾರ ಮದ್ಯಾನದಲ್ಲಿ ತಿಂಗಳುಟ್ಟೊ ಹೊತ್ತಿನಲ್ಲಿ
ಶೃಂಗಾರವಾದ ನಡುಬೀದಿ । ಕದಬಹಳ್ಳಿ ಕೆಂಪವ್ನ
ಕಂಬ ನಿಲ್ಲೋದು ಬೆಳಗಾದೊ....॥

ರಂಗಾಕೆ ಕರೆಬಂದೊ ರಂಬೇನು ನಾಡ್ಯಾಳೆ
ಎಂಬತ್ತುವರಾದ ಒಡಬೇಯ । ಧರಿಸಿಕೊಂಡು
ಕೆಂಪವ್ವೆ ಕಂಚಿನಾರೂತಿ ಬೆಳಗ್ಯಾಳೆ....॥

ಗದ್ದೂಗೆ ಮೇಲಿಂದ ಎದ್ದು ಬಾರೇ ಕೆಂಪವ್ವ
ಇದ್ದಾರೆ ನಿನಗೆ ಶಿವನಾಣೆ। ಶಿರೇವ್ದ ಕೆಂಪವ್ವ
ನಿನಗೆ ಮೊಗ್ಗು ತಂದಿವ್ನಿ ಮುಡಿಬಾರೇ....॥



# ಮಾರಣ್ಣ ಹಾಡುಗಳು....

ಸಂತೇಲಿ ಮಾರವ್ವ ಬಂದ್ಹೋಗೆ ನಮ್ಮನೆಗೆ
ಮುಂದಲಿಗೆಯಾವೆ ಮಣಿಯಾವೆ । ನೀ ಕೊಟ್ಟ
ಕಂದಗಳವರಿ ತೊಡೆಮೇಲೆ........॥

ಎಂಜೆಂಜಲಾದೊ ಅಂಜದೀರೆ ಮಾರವ್ವ
ಎಂಜಲಿಗೆಲ್ಲಾ ಎಳನೀರು । ಸಾರೀಣೆಗೇದು
ಅಂಜಾದೆ ಬಾರೆ ನಮ್ಮ ಅರಮನೆಗೆ........॥

ಬಡವಾರ ಮನೆಗ್ಹೋಗಿ ಎಡವಾಳಿ ಕಂಚಮುಟ್ಟಿ
ಬಡವೆ ಕಂದಮ್ನ ಮನೆಗ್ಹೋಗಿ । ಎಡವಿದಾಳಿ
ಅವಳು ಹಾಲು ಅರಬೀಯಾ........॥

ಹಾಲು ಅರಬೀಯು ಕೊಡೆ ಮೇಲೆ ಭಾಗ್ಯವ ಕೊಡೆ
ನೀನು ಬಾಲಾರ ಕೊಡೆ ಮನೆತುಂಬ । ಮಾರವ್ವ
ನಿನ್ನ ಬಾಗಿಲಿಗೆ ರಜವ ಹೊಡಿಸ್ಥೇವು........॥

ತುಪ್ಪದರಬಿ ಕೊಡೆ ಮತ್ತೆ ಭಾಗ್ಯವ ಕೊಡೆ
ಪುತ್ರಾನ ಕೊಡೆ ಬಲುಬೇಗ । ಮಾರವ್ವ
ನಿನ್ ತೊಟ್ಟೇಯ ರಜವ ಹೊಡಿದ್ಥೇವು........॥

ಹಾದೀ ಚೆಂದಾಕೆ ಹಾಲೀನ ಘಮನಾಕೆ
ಆಲದ ಮರದ ನೆರಳೀಗೆ । ಮಾರವ್ವ
ಎರವಾದೊ ತಾಯಿ ಮಗದೀರ್ಗೆ........॥

ಹಟ್ಟಿ ಚೆಂದಾಕೆ ತುಪ್ಪಾದ ಘಮನಾಕೆ
ಇಪ್ಪೇಯ ಮರದ ನೆರಳೀಗೆ । ಮಾರವ್ವ
ನರವಾದೆ ತಾಯಿ ಹೆಣ್ಣು ಮಕ್ಕಳಿಗೆ........॥

ದೇಶದ ಮೇಗಲೋಳೆ ಏಸೋಂದು ನರದ್ಹೋಳೆ
ಏಸೊಂದು ನರದ ಬಳೆಯೋಳೆ । ಮಾರವ್ವ
ನೀನು ಏಸೊಂದು ನರದ ಬಳೆಯೇಳೆ........॥

ಬಳೆಬಂದೊ ಬಂಕಾಪುರದಿಂದಾ
ಬಳೆಬಂದೊ ಬಂಕಾಪುರದಿಂದಾ—ಮಾರವ್ವ
ನೀನು ಲೇಸಾದ ಬಳೆಯ ತೋಡುಬಾರೆ........॥

ಮಾರವ್ವ ಅನ್ನೋಳು ಮಾಯ್ಕಾತಿ ಕಾಣೇರೆ
ಮಾಯಾದ ವಿಭೂತಿ ಮುಡಿಲಲ್ಲಿ । ಕಟ್ಟಿಕೊಂಡು
ನ್ಯಾಯಾದ ಮುಂದಾಕೆ ನಡೆದಾಳು........॥

ನ್ಯಾಯಾದ ಮುಂದಾಕೆ ನಡೆದಾಳು....ಮಾರವ್ವ
ಮಾಯಾನ್ಹೇಳ್ಯಾಳೆ ಸಭೆಯಲ್ಲಿ....ಮಾರವ್ವ
ಮಾಯನ್ಹೇಳ್ಯಾಳೆ ಸಭೆಯಲ್ಲಿ........॥

ಬಂದಾ ಬಿರಿಗೇಗೆ ಕೊಂದಳಲ್ಲೆ ಕೋಟೇಯು
ಕೊಂದಳಲ್ಲೆ ಮಾರವ್ನ ದುರುಗಾವ । ಮಾರವ್ವ
ಹೆಂಗಸಿಗ್ಯಾಕೆ ದೊರೆತಾನ........॥

ಬಾರೇ ಮಾರವ್ವ ಬಾಗ್ಹೂರಿಗ್ಹೋಗಾನ
ಸೋಗೆ ಬಾಗೂರ ನವಲೇಯು । ದೊಡ್ಡೇರಿಯು
ನೀನು ಆಗ್ರಾವ ನೋಡಿ ತಿರುಗವ್ವ........॥

ಊರೀಗೆ ದನಬಂದೊ ಹೂವಿನ ದಂಡೆಕೊಡಿರಮ್ಮ
ನೀವು ಕೂಡಿದ್ದ ಕರುವ ಬಿಡಿರಮ್ಮ । ಮಾರವ್ನ
ನಾವು ನಿವ್ವದ್ದೀಗೆ ಹಾಲು ಕೊಡಿರಮ್ಮ........॥

ಹಟ್ಟೀಗೆ ದನ ಬಂದೊ ಮುತ್ತಿನುಂಡೆ ಕೊಡಿರಮ್ಮ
ನೀವು ಕಟ್ಟಿದ್ದ ಕರುವ ಬಿಡಿರಮ್ಮ । ಮಾರವ್ನ
ನಾವು ತಳಿಗ್ಹೇಗೆ ಹಾಲು ಕೊಡಬೇಕು........॥

ಹೂವು ಬಂದೊ ಹೂವು ಹೂವಾಡಗಿತ್ತೀಗೆ
ಹೂವು ಬಿಟ್ಟು ಹೂವ ಮುಡಿಯೋಳಗೆ। (ಮುಡಿಯೊ)
ಮಾರಪ್ಗೆ
ಹೂವು ಬಂದೊ ಶಿವನ ರಥದಿಂದಾ........॥

ಮೊಗ್ಗು ಬಂದೊ ಮೊಗ್ಗಾಡಗಿತ್ತೀಗೆ
ಮೊಗ್ಗು ಬಿಟ್ಟು ಮೊಗ್ಗು ಮುಡಿಯೊಳಗೆ। (ಮುಡಿಯೊ)ಮಾರಪ್ಗೆ
ಮೊಗ್ಗೊ ಬಂದೊ ಶಿವನ ರಥದಿಂದಾ........॥

ಹೊಳೆಗ್ಹೋಗುವಾಗ ಹೊಂಬಾಳೆ ಝುಲ್ಲೆಂದೊ
ಹೊಳೆಗ್ಹೋಗಿ ಗುಡಿಗೆ ಬರುವಾಗ। ಮಾರಮ್ಮ
ಸರದಾರಿ ಬೆನ್ನು ಮುರಿದಾಳೆ........॥

ಸರದಾರಿ ಬೆನ್ನುಹೊದರೂತ ಮಾರಮ್ಮ
ಸಾರಿಸೀದ ಸಣ್ಣ ಮಡಲಕ್ಕಿ। ಮಾರಮ್ಮ
ತಾಯೀಯು ಮಾರಮ್ಮ ಗುಡಿತಕ್ಕ........॥

ಗಂಧ ಘಮ್ಮೆಂದೊ ಹೊಂಬಾಳೆ ಬಾರಾದೊ
ರೆಂಬೆ ಮಾರಮ್ಮ ಬೆಳೆದಾಳೆ। ಪೂಜಾರಿ
ನೀನು ಬೀಸಯ್ಯ ಬೆಳ್ಳಿ ಚವಲಾವ........॥

ಪೂಜೇಯು ಅಂದಾಕೆ ಪೂಜೇಯು ಚೆಂದಾಕೆ
ಪೂಜೆ ಮೇಗಾಲ ಉರಿಗೆಜ್ಜೆ। ಬರುವಾಕೆ,
ಪೂಜಾರಣ್ಣಯ್ಯ ಬೆವತಾರೆ........॥

ಕಾಸಿನೊಂಬಾಳೆ ಯಾಕುಬೇಕೆ ಮಾರಮ್ಮ
ದೇಶದೊಂಬಾಳೆ ಸುಖಿಬಾಳೆ। ತಾವಳ್ಳಿ
ತೋಟಗುತ್ತಿಗ್ಹೇಯು ಇಡಿದಾಳೆ........॥

ಹೀಗೆ ಎಲೆಮೇಲೆ ಸಿರಿವಂತರ ಮಗಬಂದಾ
ಎಳೆ ಮಾರಮ್ಮ ದೊರೆ ಬಂದಾ....ನೀನು
ಎಳೆ ಮಾರಮ್ಮ ದೊರೆ ಬಂದಾ........।

ಬಾಳೆಎಲೆಮೇಲೆ ಭಗವಂತರ ಮಗ ಬಂದಾ
ಎಳೆ ಮಾರವ್ವ ದೊರೆ ಬಂದಾ....ನೀನು
ಎಳೆ ಮಾರವ್ವ ದೊರೆಬಂದಾ........||

ಬಾಳೆಪಟ್ಟೆ ಸೀರೆ ಸೀಗೆ ಮೊಗ್ಗಿನ ರವಿಕೆ
ಬಾಣಾವರದ ಗಿಂಡಿ ಬಲಗೈಲಿ । ಇಡಿಕೊಂಡು
ಸಾಗರಿಗೆ ತನಿಯ ಎರೆದಾಳೆ........||

ರಂಗಕೆ ಹರಿಬಂದೊ ರಂಬೇನೆ ಮಾಡ್ಯಾಳೆ
ಎಂಬತ್ತೇಳ್ವಾರಾದ ಒಡಬೇಯ । ಇಕ್ಕೊಂಡು
ಅವಳು ರಂಗಾಕೆ ಆರತಿ ಬೆಳಗ್ಯಾಳೆ........||

ಹಟ್ಟೇಗೆ ಹರಿಬಂದೊ ಪುಟ್ಟಾಣಿ ಏನು ಮಾಡ್ಯಾಳೆ
ಮುವ್ವತ್ತೆರಡು ಒಡವೇಯ । ಇಕ್ಕೊಂಡು
ಅವಳಟ್ಟೇಗೆ ಬಂದು ಆರತಿ ಬೆಳಗ್ಯಾಳೆ........||

ಕೋಟೇಲಿ ಕುಂತುಕೊಂಡು ತಾನು ಏನುಮಾಡ್ಯಾಳೆ
ಸಾಲು ದೀವೀಗೆ ಬೆಳೆಕಲ್ಲಿ । ಮಾರವ್ವ
ಅವಳ್ವಾಲಿಗೊಜ್ಜುರವ ಬಿಗಿಸ್ಯಾಳೆ........||

ಪಟ್ಟೇಲಿ ಕುಂತುಕೊಂಡು ಮತ್ತೇನು ಮಾಡ್ಯಾಳೆ
ಅವಳತ್ತು ದೀವಿಗೆ ಬೆಳಕಲ್ಲಿ । ಮಾರವ್ವ
ಮೂಗೂತಿಗೆ ಮುತ್ತು ಬಿಗಿಸ್ಯಾಳೆ........||

ದಂಡಿಗ್ಹೋಗೊ ಮಗನಕೂಡ ಒಂದಿಗ್ಹೋಗೊ ಮಾರವ್ವ
ಗುಂಡು ಪಿರಂಗಿ ಮುಂದೆನೆರದು । ಗೆದ್ದು ಬೆಯ್ವಾಗ
ಮುಂಡೇವ್ದ ಸೆರಗ ಮರೆಮಾಡೇ........||

ದಾಳಿಗ್ಹೋಗೊ ಮಗನ ಕೂಡ ಜೋಡಿಲ್ಹೋಗೊ ಮಾರವ್ವ
ಜೋಡು ಪಿರಂಗಿ ಮುಂದೆ ನೆರದು । ಗೆದ್ದು ಬೆಯ್ವಾಗ
ಮುತ್ತೀನ ಸೆರಗು ಮರೆಮಾಡೇ........||

ಪಟ್ಟಣದ ಹಾದೀಲಿ ಪುಟ್ಟು ಮುತ್ತುಮಾರೋಳೆ
ಪುಟ್ಟಾಣಿ ಸೀರೆ ನೆರಿಗೋಳೆ । ಮಾರವ್ವ
ಇದೆ ಪಟ್ಟಣಾದ್ಹಾದಿ ಹೌದ್ಹೇನೆ........॥

ಇದೆ ಪಟ್ಟಣಾದ್ಹಾದಿ ಹೌದ್ಹೇನೆ—ಮಾರವ್ವ
ಪುಟ್ಟುಮುತ್ತು ತೂಗಿ ಬೆವತ್ಹೇನೆ....ನೀನು
ಪುಟ್ಟು ಮುತ್ತು ತೂಗಿ ಬೆವತ್ಹೇನೆ........॥

ಗಂಜಾಮುದ ಹಾದೀಲಿ ಗಂಧಾವ ಮಾರೋಳೆ
ಗಂಧಾದ ಸೀರೆ ನೆರಿಗೋಳೆ । ಮಾರವ್ವ
ಇದೆ ಗಂಜಾಮುಕ್ಹಾದಿ ಹೌದ್ಹೇನೆ........॥

ಇದೆ ಗಂಜಾಮುಕ್ಹಾದಿ ಹೌದೇನೆ—ಮಾರವ್ವ
ನೀನು ಗಂಧಾವ ತೂಗಿ ಬೆವಿತ್ಹೇನೆ । ಮಾರವ್ವ
ನೀನು ಗಂಧಾವ ತೂಗಿ ಬೆವಿತ್ಹೇನೆ........।

ದಂಡೀನ ಹಾದೀಲಿ ಗೊಂಡೇವ ಮಾರೋಳೆ
ಗೊಂಡೇವ್ದ ಸೀರೆ ನೆರಿಗೋಳೆ । ಮಾರವ್ವ
ಇದು ದಂಡೀಗೆ ದಾರಿಹೌದೇನೆ........॥

ಇದು ದಂಡೀಗೆ ಹಾದಿ ಹೌದ್ಹೇನೆ—ಮಾರವ್ವ
ಗೊಂಡೇವ ತೂಗಿ ಬೆವಿತ್ಹೇನೆ—ಮಾರವ್ವ
ನೀನು ಗೊಂಡೇವ ತೂಗಿಬೆವಿತ್ಹೇನೆ........॥

ಹಾಸನದ ಹಾದೀಲಿ ಹೊಸ ಮುತ್ತು ಮಾರೋಳೆ
ದಸುರಿಸೇರೆ ನೆರಿಗೋಳೆ । ಮಾರವ್ವ
ನೀನು ಹೊಸ ಮುತ್ತು ತೂಗಿಬೆವತ್ಹೇನೆ........॥

ಪಟ್ಟೆ ಸೀರೆಯುಟ್ಟು ಹೊಟ್ಟೇಲಿ ಚಿಗಣಿ ತೆಗೆದು
ಕಟ್ಟಾಣಾಡ್ಯವಳೆ ಪಗಡೇಯ । (ಪಗಡೆ) ಕ್ಯಾತನಹಳ್ಳಿ
ಪುಟ್ಟ ರಾಜಣದ ಬಯಲಲ್ಲಿ........॥

ಪುಟ್ಟರಾಜಣದ ಬಯಲಲ್ಲಿ—ಮಾರವ್ವ
ಹೋರಾಡಿ ಹುಲಿಯು ಹೊಡೆದಾಳೆ । ಮಾರವ್ವ
ಏರ್‍ಯಾಳೆ ನೀಲ ಕುದುರ್‍ಹೇಯಾ........॥

ಏರ್‍ಯಾಳೆ ನೀಲ ಕುದುರೇಯಾ—ಮಾರವ್ವ
ಹಾರ್‍ಯಾಳೆ ಹುಲ್ಲೆ ಮರಿಯಾಗಿ । ಮಾರವ್ವ
ಅವಳು ಹಾರ್‍ಯಾಳೆ ಹುಲ್ಲೆ ಮರಿಯಾಗಿ........॥

ದುರುತಕೆ ದೂರೊಡ್ಡಿ ನಗುತ ಬರುವೊಳ್ಯಾರೆ
ರಕ್ತಾದ ಕೈಯು ಹೊದರೂತ । ಮಾರವ್ವ
ಅವಳು ನಗುತಬಂದು ಊರ ಹೋಗುತಾಳೆ........॥

ಕೈಯ ಕಂಕಣದೋಳೆ ಮೈಯ ಭೂಷಣದೋಳೆ
ಮೈಯಾರಿ ಸಣ್ಣ ಧ್ವನಿಯೋಳೆ । ಮಾರವ್ವ
ನೀನು ಉಯ್ಯಾಲೆ ಇಳಿಯೆ ದನಬಂದೋ........॥

ಕರಿಯ ಸುತ್ತಿನ ಸೀರೆ ಕನಕಾಲೀಗೆ ಅರಿಷಾಣ
ಕೆಣಕದಿರವಳ ಕಿಡಿಗಣ್ಣೆ । ಮಾರವ್ವ
ಮರೆತೋರ ಮನೆಯ ಮುರಿದಾಳೆ........॥

ಮಾರವ್ನ ಗುಡಿ ಮುಂದೆ ಗಜನಿಂಬೆ ಮರವುಟ್ಟೆ
ಕಳ್ಳಾರು ಕುಯ್ವ್ಯಾಗ ಕಸಿಗಾಯಿ । ಮಾರವ್ವ
ನಿನ್ ಗಂಡ ಕುಯ್ವ್ಯಾಗ ಗಜನಿಂಬೆ........॥

ರಂಗಾಕೆ ಹರೆಬಂದೊ ಕೊಂಡಾಕೆ ಸೌದೆ ಬಂದೊ
ಮುಂಗೊಂಡ ಹಾಯೊ ಮಗಬಂದಾ । ಮಾರವ್ನ
ನಿನ್ನ ಮುಂದಲಾರತಿಯು ದಯೆದಿಂದಾ........॥

ಮಾರವ್ವ ಮಾರವ್ವ ನಿನ್ನ ಮುಖವೆಲ್ಲಾ ಸಪ್ಪಾಗೆ
ರಂಗಾಕೆ ಬಂದೋರು ನಗುತಾರೆ । ಮಾರವ್ವ
ನಿನ್ ಕಾಲೀಗೆ ಬಿದ್ದೇನು ಕಲಿಯಾಗೆ........॥

ಅಹ ! ಮಾರವ್ವ ಹೋಯ್ತಾಳೆ ಮಳವಳ್ಳಿ ಸೇವೀಗೆ
ಮಳೆ ಬಂದರಲ್ಲಿ ತಳಿಗಾಳು । ಮಾರವ್ವ
ನಿನ್ನೆಳೆಯ ಹೊಂಬಾಳೆ ಸುಳಿಯಲ್ಲಿ........॥

ಮಾರವ್ನ ಗುಡಿಮುಂದೆ ಕೋಲು ಕಟ್ಟುವನ್ಯಾರೊ
ಮಾರವ್ನ ಮಾವ ಮರಿನಿಂಗ । ಕುಟ್ಟಿದ ಕೋಲು
ಮಾರಿ ಗುಡಿಯೆಲ್ಲಾ ಮೊಳಗೀತು........॥

ಅಹ ! ಮಾರವ್ನ ಕೊಂಡ ಮೊಳದಲ್ಲಿ ಉದ್ದಂಡ
ಜೋಡಿ ಹಟ್ಟಲ್ಲಿ ನಿಲಗೊಂಡ । ಮಾರವ್ವ
ನಿನ್ ಮಾಯಾವು ಯಾರ್ಗೆ ತಿಳಿಯಾದು........॥

ಅಹ ! ಹನ್ನೆರಡೆತ್ತೀನ ಬಾಲ ಹೊನ್ನಕಂಬದ ಮೋಟೆ
ಬಾಸಿಂಗ್ದ ಕೊಳಗ ಬಲಗೈಲಿ । ಹಿಡಿಕೊಂಡು
ಅವಳು ರಾಷ್ಟೀಗೆ ಕೈಯ ಮುಗಿದಾಳು........॥

ಅಹ ! ಗುಡು ಗುಡು ಗುಟ್ಟೀತು
ನಡು ಬಾಣ ಮಿಂಚೀತು । ಮಾರವ್ವ
ನಿನ್ ತೇರಿಗೆ ಬಿತ್ತು ಹಣ್ ಜವನ........॥

ಅಹ ! ಆ ಓಣಿ ಈ ಓಣಿ ಓಣೇಲಿಉತ್ರಾಣಿ
ನಾಲ್ಕು ಕಾಲ್ಡೀಣಿ ಬಿದ್ರೇಣಿ । ಮಾರವ್ವ
ನಿನ್ ತೇರಿಗಾಗೋದು ನೂಲೇಣಿ........॥

# ಮೊದಲು ನೆನೆದೇವು

ಏಳುತಲೆ ನೆನೆವೇವು ನಂಜುಂಡ ಸ್ವಾಮೀಯ
ಮಕ್ಕಾಳ ಮನೆತುಂಬ ಕೊಟ್ಟವನ । ನೆನೆದ್ಹೇವು
ನಾವು ಕಯ್ಯ್‌ಜೋಡೀಸಿ ಮುಗಿದ್ಹೇವು....॥

ಎದ್ದು ನೆನೆದ್ಹೇವು ಸಿದ್ದೂರ ಶಿವಭೋಗೀಯ
ನಿಮ್ಮ ರುದ್ರಾಕ್ಷಿ ಸರಧರಿಸ್ತೇವೆ । (ಧರಿಸಿ) ಶಿವಭೋಗಿ
ಮದ್ದೂರ ಮುದ್ದು ಸಿದ್ದೂರ ನೆನೆದ್ಹೇವು....॥

ಎದ್ದಾದ ಮೇಲೆ ನೆನೆವ್ಹೇನು ಮದ್ದೂರ
ಕೆರೆಯ ಬಸವಾನ । ನೆನೆದಾರೆ
ನಮ್ಮ ಬೆನ್ನಿಂದಿದ್ದೊ ಕೈಲಾಸ....॥

ಎದ್ದೊಂದರ ಘಳಿಗೆ ನೆನೆದ್ಹೇವು ಶಿವಪಾದ
ಸಿದ್ದಾರ ಶಿವಪಾದ ನೆನೆದಾರೆ । ನಾವು
ಹೊತ್ತಿದ್ದ ಪಾಪ ಪರಿಹಾರ....॥

ನಿದ್ದಿರುಕಣ್ಣೇಲಿ ಬಿದ್ದೇವು ನಿಮಪಾದ
ಬಿದ್ದೇವು ನಿಮ್ಮ ಪಾದದಮೇಲೆ । ಪಾದಪೂಜೆ
ನಿನಗೆ ಎದ್ದೇಳು ಮಗಳೆ ಜಯ ಜಯ....॥

ಹರಿಯ ನೆನೆದ್ಹೇನು ಹದಿನಾರು ಜುಜದವನ
ತಿರುಗ ಭೂಷಣದ ತಿಪರಿರಂಗಯ್ನ । ನಾವು
ನಿದ್ದೇಯುಗಣ್ಣೇಲಿ ನೆನೆದ್ಹೇವು....॥

ಎದ್ದು ಗೋವಿಂದನ ಏಳುತಲೆ ಗೋವಿಂದಾನ
ನಿದ್ದೀರುಗಣ್ಣೇಲಿ ನರಹರಿ । ನೆನೆದ್ಹೇವು
ನಮಗಿದ್ದೊಷ್ಟು ಪಾಪ ಪರಿಹಾರ....॥

## ಮೊದಲು ನೆನೆದೇವು

ದೇವಿ ನೆನೆದ್ಹೇವು ದೇವಾರ ನೆನೆದ್ಹೇವು
ದೇವಿ ದೇವಾರ ನೆನೆದ್ಹೇವು ದೇವಗಿರಿ । ಮಲ್ಲಮ್ನ
ಶಿಖರಾದ ಮೇಲೆ ಬರುವ ಗೊಂಬೇಯ ತೇರ ನೆನೆದ್ಹೇವು....॥

ನಾಗಮಂಗಲದ ನಾಲೆ ಬಯಲಲ್ಲಿ
ನಾರಾಯಣ ಸ್ವಾಮಿ ರಥವ್ನೇರಿ । ಬರುವಾಗ
ನಾವ್ನೆದ್ದು ಕಯ್ಯ ಮುಗಿದ್ಹೇವು....॥

ಎದ್ದು ನೆನೆದ್ಹೇವು ಶಿದ್ದೂರ ಶಿವಬಗುತಾರ
ರುದ್ರಾಕ್ಷಿ ಜಡೆ ಮಣಿಯೋರ । (ಮಣಿಯ) ರಂಗಯ್ನ
ನಾವೆದೊಂದರಘಳಿಗೆ ನೆನೆದ್ಹೇವು....॥

ಕಲ್ಲು ಹಿಡಿದ್ಹೇವು ಕಲ್ಯಾಣಿ ನೆನೆದ್ಹೇವು
ಕಲ್ಲೀಗೆ ರಾಗಿಕೊಡುವಾಳ। (ಕೊಡುವೊ)ಭೂಮಿತಾಯೀಯ
ನಾವು ಎದ್ದೊಂದರ ಘಳಿಗೆ ನೆನೆದ್ಹೇವು....॥

ರಾಗಿ ಕಲ್ಲಡಿದು ರಾಮದೇವರ ನೆನೆದು
ರಾವಣನ ಕೊಂದ ರಣದಲ್ಲಿ । ನಿಂದಿರುವ
ಸ್ವಾಮೀಯ ನಾವು ನೆನೆದ್ಹೇವು....॥

ಹರೆಯ ಹೊತ್ತಿನಲೆದ್ದು ಹರ ನಿನ್ನ ನೆನೆದ್ಹೇನು
ಹರಿವ ಗಂಗೇಲಿ ಜಳಕಾವ । ಮಾಡ್ವಂತ
ಶಿವ ಪಾರ್ವತ್ಹೀನು ನೆನೆದ್ಹೇನು....॥

ಮುಂಗೋಳಿ ಕೂಗ್ಯಾವು ಮೂಡು ಕೆಂಪೇರ್ಯಾವು
ಸ್ವಾಮಿ ನನ್ನಯ್ಯ ರಥವೇರಿ । ಬಂದಾಗ
ನಾವ್ಹೆಲ್ಲಾ ಕಯ್ಯ ಮುಗಿದ್ಹೇವು....॥

ತುಂಬಿದ ಏರಿಮೇಲೆ ಒಂಬತ್ತು ಜಂಗುಮರ
ಮುಂಡೆ ಬರುವಾರು ನಮ್ಮ ಗುರುವಾರ । (ಗುರುವೀನ) ಪಾದಾಕೆ
ನಾವು ತುಂಬೆ ಹೂವಿಟ್ಟು ಶರಣೆಂದೊ....॥

ಶರಣೆಂದೊ ಗುರುವೀಗೆ ಶರಣೆಂದೊ ಶಿವನೀಗೆ
ಶರಣೆಂದೊ ಶಿವನ ಮಡದೀಗೆ । (ಮಡದಿ) ಪಾರ್ವತ್ತೀಗೆ
ನಾವು ಶರಣೆಂದು ಕಯ್ಯ ಮುಗಿದ್ದೇವು....॥

ನುಗ್ಗೆ ಕಾಯಂಗೆ ಮೊಗ್ಗು ಮುನ್ನೂರು ಜಾಣೆ
ನುಗ್ಗೇಯ ಮರದ ನೆರಳೀಗೆ । ಮನೆ ಗುರುವು
ನಿದ್ರೆಮಾಡೂತ ಮನಿಗ್ಯಾರೆ....॥

ಚಗಚೆ ಕಾಯಂಗೆ ನೊಗಟು ಮುನ್ನೂರು ಜಾಣೆ
ಚಗಚೇಯ ಮರದ ನೆರಳೀಗೆ । ಶಿವಗುರುವು
ತಪಸೀಗೆ ಕುಳಿತವರೆ ಮನೆ ಗುರುವು....॥

ಮಹಾಸ್ವಾಮಿ ಮುದ್ದು ಮಠದಲ್ಲಿ
ಸಿದ್ದಾರ ಮಗಳು ಶಿವಶರಣೆ । ತಂಗ್ಯಮ್ಮ
ಸಿದ್ದಾರ ಮಗಳು ಶಿವಶರಣೆ....॥

ಸಿದ್ದೂರ ಮಠದಲ್ಲಿ ಗುದ್ದಾಡೊರಿವರ್‍ಯಾರೆ
ಗುರುಲಿಂಗ ಎಂಬಸುಗೋಳು । ಗುಂಗರಮೊಳೆಯ
ಸ್ವಾಮೀಯ ಪೂಜೀಗೆ ಹಾಲಕರೆದ್ದೇವು....॥

ಕೋಟೆ ಕೋಟೆ ಕಂಡೆ ಕೊರಳಲಿಂಗವ ಕಂಡೆ
ದಾಟುತಲಿ ಕಂಡೆ ಜಲದಿ ಗುಂಗರಮೊಳೆಯ । ನಾನು
ಗವಿಯೊಳಗೆ ಕಂಡೆ ಮನೆ ಗುರುವ....॥

ಗುರುವೆ ನಿಮ ನೆನೆದು ಉರಿವ ಕೆಂಡವ ಹಿಡಿದು
ಹೆಡೆಯಾಡಿ ಬರುವ ಎಳೆನಾಗರ । ಮರಿಯ
ಹಿಡಿದ್ದೇವು ಸ್ವಾಮಿ ನಿನ್ನಾದಯದಿಂದಾ....॥

ಕೋಟೆ ಶರಣರ ಕಂಡೂ ಕೊರಳ ಲಿಂಗವ ಕಂಡೂ
ದಾಟುತಲಿ ಕಂಡೆ ಕಣಿವ್ಹೇಯ । ಮಲ್ಲಯ್ನ
ನಾವು ಕಾಣುತ ಕೈಯ ಮುಗಿದ್ವೇವು....॥

## ಮೊದಲು ನೆನೆದೇವು

ಏಳುವಾಗ ನೆನೆವೇನು ಬಾಳಲೋಚನದವನ
ಜೋಳಿಗೆ ಹೊನ್ನು ಮಳೆಗರೆದ । ಕೈಲಾಸದ
ನಾವು ದೇವ ಮಲ್ಲಯ್ನ ನೆನೆವ್ಹೇನು....॥

ಕಲ್ಲು ಹೂಡಿ ನೆನೆದ್ಹೇವು ಕಲ್ಯಾಣದಯ್ಯಾನ
ಬಿಲ್ಲು ಬಾಣಾದ ''ದುರ್ಧೇಯು । ರಂಗಯ್ನ
ನಾವು ಸೊಲ್ಲು ಸೊಲ್ಲೀಗೆ ನೆನೆದ್ಹೇವು....॥

ಎದ್ದಾದ ಮೇಲೆ ನೆನೆವ್ಹೇನು
ನಮ್ಮ ಮದ್ದೂರ ಕೆರೆಯ ಬಸವಾನ । ನೆನೆದಾರೆ
ನಮ್ಮ ಬೆನ್ನಿಂದಿದ್ದೊ ಕೈಲಾಸ....॥

ರಾಮ ಲಕ್ಷ್ಮಣನೆ ಸೀತೇಯ ತಂದೋನೆ
ರಾಮೂರ ಬಂಟ ಹನುಮಂತ । ನಿಮ್ಗೆ ಶರಣೆಂದೊ
ನಮಗೆ ಜಯ ಜಯ ರಾಮ ಕರುಣೀಸು....॥

ಈಗಲೆ ಕಲ್‌ಹೂಡಿ ಈಗ್ಯಾರ ನೆನೆದ್ಹೇವು
ಈವೂರ ಗ್ರಾಮದೊಡೆಯಾನ । (ದೊಡೆಯ) ಮಲ್ಲಯ್ನ
ನಾವು ಈಗ ಕಲ್‌ಹೂಡಿ ನೆನೆದ್ಹೇವು....॥

ದೊಡ್ಡನೆ ಕಲ್‌ಹೂಡಿ ದೊಡ್ಡೋರ ನೆನೆದ್ಹೇವು
ದೊಡ್ಡ ಗ್ರಾಮಾದ ದೇವತೇಯ । (ದೇವತೆ) ಲಕ್ಕಮ್ನ
ನಾವು ಈಗಾಲೆ ದೊಡ್ಡ ಕಲ್ಲೂಡಿ ನೆನೆದ್ಹೇವು....॥

ಅಕ್ಕಿ ಒರಳೀಗೆ ಹುಯ್ದು ಅಪ್ಪ ನಿನ ನೆನೆದ್ಹೇನು
ಅಕ್ಕಮಹಾದೇವಿ ಗಿರಿಜೇಯ । ಕೆಂಪಮ್ನ
ನಾವು ಮಂಗಳವಾರ ದಿವ್ಸ ನೆನೆದ್ಹೇವು....॥

ಮಾಳೀಗೆ ಮ್ಯಾಗಾಳ ಸಾಲಂಚಿನ ಗೆರಸ್ಹೀಯ
ತಾಯಮ್ಮ ನಡುಮನೆಗೆ ಬಂದಾಗ । ನಾವಿಬ್ಬಾರು
ಸೇರಿ ತಾಯೀಯ ನೆನೆದ್ಹೇವು....॥

ಕಲ್ ಹೂಡಿ ನೆನೆವೇನು ಕಲ್ಯಾಣದಯ್ಯಾನ
ಕಲ್ಲುಕಾವೇರಿ ಕಪಸೀಯ। ನಂಜಯ್ನ
ನಾವು ಸೊಲ್ಲು ಸೊಲ್ಲಿಗೆ ನೆನೆದ್ಹೇವು....॥

ಕಲ್ಲು ಬಿಡುತ್ತೀವಿ ಸಿಟ್ಟು ಮಾಡಬೇಡಿ
ಕುಕ್ಕೇಲಿ ರಾಗಿ ಬಿಳಿಯಾಲೆ ತಕ್ಕೊಂಡು ನಾವು
ಮತ್ತೆ ರಾತ್ರೀಕೆ ಬಂದು ಶರಣೆಂದು ಕಲ್ಲುಹಿಡಿತ್ತೀವಿ॥

ಕಲ್ಲು ಕೊಟ್ಟವ್ಮಾಗೆ ಎಲ್ಲಾ ಭಾಗ್ಯವು ಬರಲೀ
ಪಲ್ಲಕ್ಕಿ ಮೇಲೆ ಮಗ ಬರಲಿ। ಈ ಮನೆಗೆ
ಮಲ್ಲಿಗೆಯಂತ ಸೊಸೆ ಬರಲಿ....॥

ಮಲ್ಲಿಗೆಯಂತ ಸೊಸೆಬರಲಿ.... ಈ ಮನೆಯ
ಅಣ್ಣಯ್ಯಗೆ ಬರಲಿ ದೊರೆತಾನ।

ಕಲ್ಲು ಬಿಡುತ್ತೀನಿ ಎಲ್ಲಾ ಶರಣರು ಕೇಳಿ
ಕಲ್ಲೀನ ಮೇಲೊಬ್ಬ ಬಸವಯ್ಯ। ಕೂತಕೊಂಡು
ನಾವು ಕಲ್ಲು ಬಿಟ್ಟು ಕಯ್ಯ ಮುಗಿದ್ಹೇವು....॥

ಕೋಳಿ ಕೂಗಿದಾಗ ನಾರಿರ್ದ್ಹೇಳುವಾಗ
ನಾವೆದ್ದು ಕಲ್ಲು ಹಿಡಿದಾಗ। ಶಿವರಾಯ
ತಾನೆದ್ದು ಶಂಖ ನುಡಿಸ್ಯಾನು....॥

ನಾರಾಯಣ ನಿನ್ನ ನಾಮದ ಬೀಜಾವ
ನಾನೆಲ್ಲಿ ಬಿತ್ತಿ ಬೆಳೆಯಾಲಿ। ನಿನನಾಮ
ನಾನು ನಾಲೀಗೆ ಮೇಲೆ ಬೆಳೆದ್ಹೇನು॥

ಹೋಗುವಾಗ ಎಡಕಾದ ಬರುವಾಗ ಬಲಕಾದ
ಈಗ ನನ್ನ ಕೊಡಕೆ ಇದಿರಾದ। ಬಲಭೀಮ
ನಾನು ಕೊಡಹೊತ್ತು ಕಯ್ಯ ಮುಗಿದ್ಹೇನು॥

ಊರು ಮುಂದಿರುವ್ಹೋನೆ ವೀರಾನೆ ಶೂರಾನೆ
ನೀಲಿ ನಾಮಾದ ಒಡಯಾನೆ। (ಒಡಯ) ತಿಮ್ಮಯ್ಗೆ
ನಾವು  ನೀರಿಗ್ಹೋಗೂತ ಕಯ್ಯ ಮುಗಿದ್ಹೇವು....॥

ಎದ್ದು ನೆನೆದ್ಹೇನು ಸಿದ್ದೂರ ಶಿವಭೋಗೀಯ
ಬದ್ದೀಯ ಕೆರೆಯ ಬಸವಾನ। ಪಾದವ
ನಿದ್ದೀರುಗಣ್ಣಲ್ಲಿ ನೆನೆದ್ಹೇವು....॥

ದೇವಿ ನೆನೆದ್ಹೇವು ದೇವಾರ ನೆನೆದ್ಹೇವು
ದೇವಿ ದೇವಾರ ನೆನೆದ್ಹೇವು। ನಂಜನಗೂಡ ದೇವಿರವ್ನ
ನೆನೆದಾರೆ ಬಂದೊಷ್ಟು ಪಾಪ ಪರಿಹಾರ....॥

ಅತ್ತೆ ಮಾವರ ಪಾದ ಮತ್ತೆ ಗುರುವಿನ ಪಾದ
ಸ್ವಾಮಿ ಚಲುವಯ್ನ ಸಿರಿಪಾದ। ನೆನೆದಾರೆ
ನಮಗೆ ಬಂದೋಟು ಪಾಪ ಪರಿಹಾರ....॥

ತಾಯಿ ತಂದೆ ಪಾದ ಮೇಲೆ ಗುರುವಿನ ಪಾದ
ಸ್ವಾಮಿ ಕಾವೇಟ ರಂಗಯ್ನ ಸಿರಿಪಾದ। ನೆನೆದಾರೆ
ನಮಗೆ ಬಂದೋಟು ಪಾಪ ಪರಿಹಾರ....॥

ಅಕ್ಕನ ನೆನೆದೇವು ಪಕ್ಕನೆ ಪದಬಂದೊ
ಅಕ್ಕ ಹರಸೀಯ ನೆನೆದ್ಹೇವು। ಸರಸ್ವತಿ
ತಪ್ಪದೆ ಮತಿಯ ಕೊಡು ನಮಗೆ....॥

ಎದ್ದೊಂದು ಘಳಿಗೆ ಯಾರ್‍ಯಾರ ನೆನೆದ್ಹೇನು
ಸಿಪ್ದಾರ ಮಡದಿ ಶಿವಶರಣೆ। ನೆನೆದಾರೆ
ನಮಗೆ ಬಂದೋಟು ಪಾಪ ಪರಿಹಾರ....॥

ಮುಂಚೆ ನೆನೆದ್ಹೇನು ಕಂಚಿಕಾಳೀಶ್ವರಿಯ
ಚುಂಚನಗಿರಿಯ ಬೈರುವನ। ಮೂಡಿಬರುವ
ಕೆಂಚಸೂಲಿಗನ ನೆನೆದ್ಹೇನು....॥

ಆರತಿಯ ಬೆಳಗೇನು ಸಿನ ಪಾದವ ನೆನೆದೇನು
ಒಲಿಯುದ ತಾಯಿ ಸಿರಿದೇವಿ । ಸರಸ್ವತಿಯೆ
ನಾ ನಿನಗೆ ಹೊನ್ನಿ್ೀನ ಕಳಸ ಇಡುತೀನಿ....॥

ಆರತಿಯ ಬೆಳಗಿ ಬೆರಳೆಲ್ಲಾ ನೊಂದು
ದೂಪಾವ ಬೀಸಿ ಭುಜನೊಂದೊ । ಸರಸ್ವತಿಯೆ
ನಿನ್ನ ನಾಮಾವ ಪಾಡಿ ನನ್ನಸ್ವರನೊಂದೊ....॥

ಬೆಳ್ಳಿಬೆಟ್ಟದ ಮೇಲೆ ಕಂಡೇನು ಸರಸ್ವತಿಯ
ಲೋಕಾದ ಮಾತೆ ಗಿರಿಜಾತೆ । ಸರಸ್ವತಿಯೆ
ನಿನ್ನ ದ್ಯಾನದಲಿ ಕಂಡೆ ಕೋಟೆ ಜಂಗಮುರ....॥



# ಪ್ರಾರ್ಥನೆ

ಮೊದಲು ನೆನೆದ್ಹೇನು ಗೌರೀಕುಮಾರಾನ
ತನುಮತ ಶಿವಗಂಗೆ ಬೆನುವಾನ....||
ಏಳುತಲೆದ್ದು ಯಾರ‍್ಯಾರ ನೆನೆದ್ಹೇವು
ಎಳ್ಳು ಜೀರಿಗೆಯ ನೆನೆದ್ಹೇವು |
ಎಳ್ಳುಜೀರಿಗೆಯ ಬೆಳಿಯೊ ಭೂಮಿ ತಾಯೀಯ
ಎದ್ದೊಂದರಘಳಿಗೆ ನೆನೆದ್ಹೇನು....||

ಏಳುತಲೆದ್ದು ಯ್ಹಾರ‍್ಯಾರ ನೆನೆದೇವು
ಹುತ್ತಾದಲ್ಲಿರುವ ಧಾರಣೀಯ |
ಹುತ್ತಾದಲ್ಲಿರುವ ಧರಣಿ—ಕಾಳಿಂಗಾನ
ಮತ್ತೊಂದು ಘಳಿಗೆ ನೆನೆದ್ಹೇವು....||
ಮೊದಲು ನೆನೆದ್ಹೇನು ಗೌರೀಕುಮಾರಾನ
ತನುಮತ ಶಿವಗಂಗೆ ಬೆನುವಾನ—||

ಮೊದಲು ನೆನೆದ್ಹೇನು ಸೋಮೇಶ ಲಿಂಗಾನ
ಶಿವಗಂಗೆ ತನುಮತ ಬೆನುವಣ್ಣಾನ |
ಶಿವಗಂಗೆ ಬೆನುವಣ್ಣ ಸೂಟೀಗೆ-ಕಾಳಿಂಗಾನ
ದಂಡೇಯ ನಾಯ್ಕೊಡಿಯಾನ....||

ಮುದ್ದು ಕುಮಾರ ಕೊಡುಮತಿಯ
ನೀನು ಮುದ್ದು ಕುಮಾರ ಕೊಡುಮತಿಯ |
ಮೊದಲು ನೆನೆದ್ಹೇನು ಗೌರೀಕುಮಾರಾನ
ತನುಮತ ಶಿವಗಂಗೆ ಬೆನುವಾನ....|

# ಮುಳಕಟ್ಟೆ* ಹುಚ್ಚಮ್ನ ಹಾಡುಗಳು

ಕಪ್ಪನ್ನಬಹುದೆ ಕಸ್ತೂರಿ ಮನೆಯೋಳ
ಇಕ್ಕಂಡೆ ಹೂವ ಮುಡಿಯೋಳ । (ಮುಡಿಯೊ) ಹುಚ್ಚಮ್ನ
ನಾವು ಕಪ್ಪನ್ನಬಹುದೆ ಕರಿಚಲುವೆ....॥

ಕರಿಯ ಕಣೆಗಲಹೂವು ತುರುಬೀಗೆ ಸಾಲವೆಂದೊ
ಎಳೆಯ ಹೊಂಬಾಳೆ ತರಹೇಳಿ । ಹುಚ್ಚಮ್ಮ
ಮೈಸೂರ ದೊರೆಗೋಳಿಗ್ವಾಲೆ ಬರೆದಾಳೆ....॥

ಸಣ್ಣ ಸೀರೀಗೆ ಚಿನ್ನಾದ ಗೊಂಡೇವು
ಸಣ್ಣ ಬೆತ್ತವ ಕೈಲಿಡಿದು । ಹುಚ್ಚಮ್ಮ
ಅವಳು ಸೊನ್ನಾರಿ ನಡೆಗೆ ನಡೆದಾಳು....॥

ಏಳೆ ಹುಚ್ಚಮ್ಮ ಎಷ್ಟೊತ್ತು ಸುಖನಿದ್ರೆ
ಕುದುರೆ ಬಂದು ಕುಚುವ ಮುರಿದಾವೆ । ಮೈಸೂರ
ಚದುರೆ ಬಂದು ಕದವ ತೆಗೆದಾಳು....॥

ಏಳೆ ಹುಚ್ಚಮ್ಮ ಎಷ್ಟೊತ್ತು ಸುಖನಿದ್ರೆ
ಆನೆಬಂದು ಅಗಚೆ ಮುರಿದಾವೊ । ಮೈಸೂರ
ರಾಣಿ ಬಂದು ಕದವ ತೆಗೆದಾಳು....॥

ಮಾವೀನಹಣ್ಣ ಆರ್ಥೀಳು ಮೆಲುಬಹುದು
ಮಹಲಿನ ಮುಂದೆ ನಿಲುಬಹುದು । ಹುಚ್ಚಮ್ನ
ರಾವೀನ ಮುಂದ್ಯಾರು ನಿಲುವೋರು....॥

---

* ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೋಕಿನಲ್ಲಿರುವ ಒಂದು ಪ್ರಸಿದ್ಧವಾದ ಯಾತ್ರಾಸ್ಥಳ. ಅಲ್ಲಿ ಹುಚ್ಚಮ್ಮನೆಂಬ ದೇವರಿದೆ. ಭಕ್ತಾದಿಗಳು ಆ ದೇವರ ಕುರಿತು ಹಾಡುವ ಗೀತೆಗಳಿವು.

ಕಿತ್ತಲೆ ಹಣ್ಣ ಹತ್ತೆಂಟು ಮೆಲುಬಹುದು
ಕಿಚ್ಚೀನ ಮುಂದಾದರೂ ನಿಲುಬಹುದು । ಹಚ್ಚಮ್ಮ
ರಚ್ಚೆ ಮುಂದ್ಯಾರು ನಿಲುವೋರು....॥

ನಾಳಿಕೆಂಟು ದಿವಸಕ್ಕೆ ನಾಗಮಂಗಲದ ಸಂತೆ
ನಾಮಾದ ಬಟ್ಟು ಹಣೆಯಲ್ಲಿ ಇಟುಕೊಂಡು । ಹುಚ್ಚಮ್ಮ
ಅವಳು ನಾಗಮಂಗಲಕೆ ಹೊರಟಾಳು....॥

ಇವತ್ತಿಗೆಂಟು ದಿವಸಕ್ಕೆ ಶುಕ್ರವಾರ ಸಂತೆ
ಚುಕ್ಕೀಯ ಬಟ್ಟು ಹಣೆಯಲ್ಲಿ ಇಟುಕೊಂಡು । ಹುಚ್ಚಮ್ಮ
ಅವಳು ಶುಕ್ರವಾರ ಸಂತೆಗೊರಟಾಳು....॥

ಹಾಲು ಅಟ್ಟವರೆ ಅರಿವಾಣ ಬೆಳಿಗ್ಯವರೆ
ಬಾಳೀಯ ಹಣ್ಣ ಸುಲಿದು ಮಡಿಗ್ಯವರೆ । ಹುಚ್ಚಮ್ಗೆ
ಅವಳು ಬಾಯಾರಿ ಬರುವ ರಬಸೀಗೆ....॥

ತುಪ್ಪಾವ ಕಾಸ್ಯವರೆ ಚಟ್ಟೀಯ ಬೆಳಿಗ್ಯವರೆ
ಕಿತ್ತಲೆ ಹಣ್ಣ ಸುಲಿದವರೆ । ಹುಚ್ಚಮ್ಗೆ
ಅವಳು ರಚ್ಚೆದ್ದು ಬರುವ ರಬಸ್ಸೀಗೆ....॥

ಬಾಗೂರ ಸಂತಿಂದ ಬಾಳೀಯ ಗೊನೆಬಂದೋ
ಬಾಳಿಲ್ಲಾ ಬಾಳೆ ಸುಳಿಯಿಲ್ಲಾ । ಬಾಗೂರ
ದ್ಯಾವಣ್ಣಗೌಡ ಕಳಿವ್ಯಾನೆ....॥

ಕಿಕ್ಕೇರಿ ಸಂತಿಂದ ಅಕ್ಕಿಹೊಂಬಾಳೆ ಬಂದೋ
ಸಿಕ್ಕಲ್ಲಾ ಸೀಗೆ ಎಲೆಯಿಲ್ಲಾ । ಕಿಕ್ಕೇರಿ
ಕಾಮಣ್ಣಗೌಡ ಕಳಿವ್ಯಾನೆ....॥

ಬಾಳೀಯ ಮರಕೆ ಬಾಗೀಸಿ ಕುದುರ್ರೆಯ ಕಟ್ಟೆ
ಬಾಲೆ ಹುಚ್ಚಮ್ಮ ಪಗಡೇಯ । ಆಡುವಾಗ
ಬಾಳೀಯ ಮೊಗ್ಗು ಸುರಿದಾವೊ....॥

ಇಂಬೀಯು ಗಿಡಕೆ ನಂಬಿಸಿ ಕುದುರ್ಹೀಯು ಕಟ್ಟಿ
ರಂಬೆ ಹುಚ್ಚಮ್ಮ ಪಗಡೇಯು । ಆಡುವಾಗ
ಇಂಬೀಯು ಮೊಗ್ಗು ಸುರಿದಾವೆ....॥

ಉತ್ತಮರ ಹಟ್ಟಲ್ಲಿ ಮುತ್ತಿನ ಜಗಲೀಯು ಮೇಲೆ
ಕುಂತು ಅರಿಷಾಣ ಅರಿಯೋಳೆ । (ಅರಿಯೊ) ಹುಚ್ಚಮ್ಮ
ಹಬ್ಬವೇನೆ ನಿನ್ನ ತವರಲ್ಲಿ....॥

ಹಾರುವರ ಹಟ್ಟಲ್ಲಿ ಗಾರೆಜಗುಲಿಯು ಮೇಲೆ
ಆಡಿ ಅರಿಷಾಣ ಅರಿಯೋಳೆ । (ಅರಿಯೊ) ಹುಚ್ಚಮ್ಮ
ಪರುಷೇನೆ ನಿನ್ನ ತವರಲ್ಲಿ....॥

ಇದೆ ಅಗ್ರಾರದಲ್ಲಿ ಇರುವಲ್ಲೆ ಹುಚ್ಚಮ್ಮ
ಬರುವಲ್ಲೆ ನನ್ನ ಸ್ವಪ್ನಾಕೆ । ಮೈಸೂರ
ಮರಿ ಕುದುರೆನ್ಹೇರಿ ಮೆರೆವಲ್ಲೆ....॥

ಹಾರುಗಿತ್ತಿಯಲ್ಲೆ ಆನಂದಪುರದಲ್ಲಿ
ಜೇನುಗಿತ್ತಿಯಲ್ಲಾ ಕುಲದಲ್ಲೆ । ಹುಚ್ಚಮ್ಮ
ನೀನು ಗಂಗೆ ಮಕ್ಕಳಿಗೆ ಒಲಿದ್ಹೇನೆ....॥

ಮಂಗಳ್ವಾರ ಬಿಟ್ಟು ಮನೆಯದೀವಿಗೆ ಬಿಟ್ಟು
ಲಿಂಗಸ್ಥಾನ ಬಿಟ್ಟು ಹೊರಡೋಳೆ । (ಹೊರಡೊ) ಹುಚ್ಚಮ್ಮ
ನಿಮ್ಮ ಮಂಗಳಾರತಿ ಅನುಗಾಲ....॥

ಮಂಗಳ್ವಾರದೋಳೆ ಮನೆಯ ದೀವಿಗ್ಹೋಳೆ
ಎಲ್ಲಿಗ್ಹೋಗಿದ್ದೆ ತಡವಾದೆ । ಮೂಡಲಗಿರಿ ತಿಮ್ಮಪ್ಪ
ನ್ಯಾಯಕ್ಹೋಗಿದ್ದೆ ಮಗನೆ ತಡವಾಯ್ತು....॥

ಹೊತ್ತು ಮೂಡೋಕೆ ಮೊದಲೆ ಮೂಡಿಬಾರೋ ಸೂಲೀಗ
ನಿನ್ನಂತನೊಬ್ಬ ಮಗ ಬೇಕು । ಮುಳಕಟ್ಟೆ
ಹುಚ್ಚಮ್ಮನಂತ ಸೊಸೆಬೇಕು....॥

ಕತ್ತಲೆ ಮನೆಯಲ್ಲಿ ಮತ್ತೇನು ಗೆದ್ದಾಳು
ಹತ್ತು ದೀವೀಗೆ ಬೆಳಕಲ್ಲಿ । ಹುಚ್ಚಮ್ಮ
ನಿನ್ ಕಪ್ಪಿಗೊಜ್ಜುರವ ಬಿಗಿಸ್ಯಾರು....॥

ತಿಂಗಾಳ ಬೆಳಕಿನಲ್ಲಿ ಮಂಗಾಳ ಗೆದ್ದಾಳು ।
ಸಾಲು ದೀವಿಟಗೆ ಬೆಳಕಲ್ಲಿ । ಹುಚ್ಚಮ್ಮ
ನಿನ್ ವಾಲಿಗೊಜ್ಜುರವ ಬಿಗಿಸ್ಯಾರು....॥

ಮೈಸೂರ ಸೀಮಿಂದ ಬಂದವಳೆ ಹುಚ್ಚಮ್ಮ
ಮುಂಬಾಯನೆಲ್ಲಾ ಮಸಗೊಂಡು । ಮೈಸೂರ
ದೇಶಕ್ಹೋಗಿ ರಾವಿನ ಮರಿಯ ಸಿಗಿದಾಳು....॥

ದೇವರು ಮಾಡಾಕೆ ಬಾಳೀಯ ಹಣ್ಣುಬೇಕು
ಬಾಗಿಲಿಗೆ ದೂಳು ಸುರಿಬೇಕು । ಹುಚ್ಚಮ್ಗೆ
ಬಾಲೆ ಬಟ್ಟಲಿಗೊಂದಣ್ಣುಬೇಕು....॥

ತಿಪಟೂರ ಬಡಗಿ ತಿಪರಿಗಾರ ಕಾಣಮ್ಮ
ಇಪ್ಪಂಟಿ ಉಳಿ ಕೈಬಾಚಿ । ಹುಚ್ಚಮ್ನ
ಕೆಪ್ಪೇಯ ಭಾವ ಕಡೆದ್ಹೋನು....॥

ಕಂಬಕಂಬಾಕೆ ಎಂಬತ್ತು ದೀವೀಗೆ
ಕಂಬವನ್ಯಾರಮ್ಮ ಕಡೆದೋರು । ಹುಚ್ಚಮ್ಮ
ರಂಬೆ ನಿನ್ಯಾರೆ ಎರೆದ್ಹೋರು....॥

ಹಾದೀಯ ಗುಡಿಸ್ಹೀರಿ ಬೀದೀಯ ಗುಡಿಸ್ಹೀರಿ
ರಾಜ ಮಲ್ಲಿಗೆಯ ಅರವೀರಿ । ಹುಚ್ಚಮ್ಮ
ರಾಣಿಬಂದು ಊರು ಹೋಗುತಾಳೆ....॥

ಹಟ್ಟೀಯ ಗುಡಿಸ್ಹೀರಿ ತೊಟ್ಟೀಯ ಗುಡಿಸ್ಹಿರಿ
ಪುಟ್ಟಮಲ್ಲಿಗೆಯ ಅರವೀರಿ । ಹುಚ್ಚಮ್ಮ
ನಿಶ್ರಿಬಂದು ಊರು ಹೋಗುತಾಳೆ....॥

ಬಾರೇ ಹುಚ್ಚಮ್ಮ ನೀ ಕೊಳ್ಳಿಕಾಲಿಗೆ ನೀರ
ಬೆಳ್ಳಿ ಬಟ್ಟಲಲ್ಲಿ ಬಿಳಿಯಾಲೆ । ತಂದಿವಿನಿ
ಕೊಳ್ಳಮ್ಮ ನಿನ್ನ ಹರಕೇಯಾ....॥

ಒಪ್ಪತ್ತಿನ್ನೂಟ ಚುಚ್ಚೀದ ಬಾಯಿಬೀಗ
ಉಕ್ಕೊ ಹೊಳೆಯಲ್ಲಿ ಬರಲಾರೆ । ಹುಚ್ಚಮ್ಮ
ನೀ ಒಪ್ಪಿಸಿಕೊಳ್ಳಿ ಹರಕೇಯಾ....॥

ಹೊಡಿಕಾಯಿ ಹೊಡಿತ್ತೀನಿ ಹಿಡಿಕಾಯಿ ಹಿಡಿತ್ತೀನಿ
ಬಂದು ನಿನ್ನ ಬನವ ಹೋಗುತ್ತೀನಿ । ಹುಚ್ಚಮ್ಮ
ನೀನು ಬಾಷೇಯು ಕೊಡೆ ಬಲಗೈಲಿ....॥

ಆಚೆ ಕೋಡೀಲಿ ನೀನು ಈಚೆ ಕೋಡೀಲಿ ನಾನು
ನೀನು ಬಾಷೇಯಕೊಡೆ ಬಲಗೈಲಿ । (ಬಲಗೈಯ) ಹುಚ್ಚಮ್ಮ
ನಾನು ಬಾಷೇಗೆ ತಪ್ಪೋರ ಮಗಳಲ್ಲಾ....॥

ಗಂಧಾದ ಹಳ್ಳಿಗ್ಹೋಗಿ ಗಂಧಾಕೆ ನೀರಿಲ್ಲಾ
ಮುಂದೆ ನಮ್ಮೂರ ಕೆರೆತುಂಬಿ । ಹುಚ್ಚಮ್ಮ
ಗಂಧಾದ ಮಡುವ ಕಲಿಸ್ಯಾಳೆ....॥

ನಾಮದಳ್ಳಿಗ್ಹೋಗಿ ನಾಮಾಕೆ ನೀರಿಲ್ಲಾ
ಹಿಂದೆ ನಮ್ಮೂರ ಕೆರೆತುಂಬಿ । ಹುಚ್ಚಮ್ಮ
ನಾಮಾದ ಮಡುವ ಕಲಿಸ್ಯಾಳೆ....॥

ಅರಸಿ ಹುಚ್ಚಮ್ಮಗೆ ಗೆರಸೀಲಿ ಹೂ ಬಂದೋ ।
ವರ್ಷಾಕೆ ನೂರು ಮಡೆಬಂದೋ । ಹುಚ್ಚಮ್ಮ
ಎಷ್ಟೊತ್ತೆ ನಿನ್ನ ಅಯಿಭೋಗ....॥

ಬಂಗ ಬಂದಾವೆ ಬಂದ್ಹೋಗೆ ಮನೆಗಂಟ
ಬಂಗಲ್ಲಾ ಕಾಣೆ ಬಡತಾನ । ಹುಚ್ಚಮ್ಮ
ನೀನು ಬಂದ್ಹೋಗೆ ನಮ್ಮ ಮನೆತನಕ....॥

ಕೊಲ್ಲಾಪುರದೋಳೆ ಕೊರವಂಜಿಗೂಡ್ಹೋಳೆ
ನರಲೋಕದಲ್ಲಿ ಮೆಲ್ಲಕೇಳೆಜ್ಜೆ ನಡೆಯೋಳೆ । ಹುಚ್ಚಮ್ಮ
ಅರುವಿಲ್ಲದಂತೆ ಇರುವೋಳೆ....॥

ಕೊಲ್ಲಾಪುರದಲ್ಲಿ ಕ್ವಾವಾಳ ಏನಮ್ಮ
ದಾಳಿ ಬಂದಾವೆ ಎರಡಾನೆ । ಮೇಟೇಯು
ಕೋಟೇಯು ದುಮುಕಿ ಬರುತಾವೆ—॥

ಇವರಕ್ಕ ತಂಗೇರು ಕಟ್ಟೆ ನೀರಿಗ್ಹೋಗಿ
ಕಟ್ಟೇಲಿ ನಿಂದು ಕೈ ಮುಗಿದು ಬೇಡುವಾಗ । ಮೂಡಲಗಿರಿ
ತಿಮ್ಮಪ್ಪ ಮಾತ್ಹೀನ ಗೌಳಿಯಾಗಿ ನುಡಿದಾನು....॥

ಇವರಕ್ಕ ತಂಗೇರು ಬಾವಿನೀರಿಗ್ಹೋಗಿ
ಬಾವಿಲ್ಲಿ ನಿಂದು ಕೈ ಮುಗಿದು ಬೇಡುವಾಗ । ಮೂಡಲಗಿರಿ
ತಿಮ್ಮಪ್ಪ ಮಾಯಾದ ಗೌಳಿಯಾಗಿ ನುಡಿದಾನು....॥

ವಾಲೇಯನಿಕ್ಕ್ಯೊಂಡು ಒಳಮುತ್ತ ಕಟ್ಟಗೊಂಡು
ಮಾಳಿಗೇಲೆಮ್ಮ ಕರೆಯೋಳೆ । (ಕರೆಯೊ) ಮುಳಕಟ್ಟೆ
ಹುಚ್ಚಮ್ಮ ನಿನ್ ವಾಲೆ ಸೂಲಿಗ್ಗೆ ಹೊಳೆದಾವೆ....॥

ಬಟ್ಟನಿಕ್ಕ್ಯೊಂಡು ಪಟ್ಟೇಯ ಹಾಕಿಕೊಂಡು
ತೊಟ್ಟೇಲಿ ಎಮ್ಮೆ ಕರೆಯೋಳೆ । (ಕರೆಯೊ) ಮುಳಕಟ್ಟೆ
ಹುಚ್ಚಮ್ಮ ನಿನ್ನ ಕಪ್ಪುಸೂಲಿಗ್ಗೆ ಹೊಳೆದಾವೆ....॥

ಹಸುರಾವಿನ ಕಟ್ಟು ಮೇಲೆ ಚಿಲುಕಾದ ಬಟ್ಟು
ದಸುರಿ ಕಾಳಗಕೆ ಹೋಗಿ ಬರುವೋಳೆ।(ಬರುವೊ)ಮುಳಕಟ್ಟೆ
ಹುಚ್ಚಮ್ಮ ನಿನ್ ಮಸರು ಅನ್ನ ಹಾಳೆ ಇದಿರಾದೊ....॥

ನಾಗರಹಾವಿನಕಟ್ಟು ಮೇಲೆ ಚಿಲುಕಾದ ಬಟ್ಟು
ರಾಮರ ಕಾಳಗಕೆಹೋಗಿ ಬರುವೋಳೆ । (ಬರುವೊ) ಮುಳಕಟ್ಟೆ
ಹುಚ್ಚಮ್ಮ ನಿನ್ ಹಾಲು ಅನ್ನ ಹಾಳೆ ಎಡೆಯಾದೊ....॥

ಮೂಡಾಲ ಬಾರೇಲಿ ಮುಂಜೇನು ಕವಿದಾವೆ
ಸೂಳೇರು ಕುಣಿಯೋ ಸುರಹೊನ್ನೆ । ಮರದಡಿಯ
ಸಾಂಬ್ರಾಣಿ ಮಂಜು ಕವಿದಾವೆ....॥

ಮೂಡಾಲ ಬಾರೇಲಿ ಮುಂಗೋಳಿ ಕೂಗೀದೊ
ಏಳಮ್ಮ ತಾಯಿ ಬೆಳಗಾದೊ । ನಿನ್ನಟ್ಟ
ಕೀಲಾದರೆಮ್ಮ ಕರವುಂಡೊ....॥

ಅರಿಷಾಣ ಕಂಬಿಸೀರೆ ಸರಪಾಣಿ ದಾರಾದವಾಲೆ
ಅರಸಾರ ಮಗಳು ಹುಚ್ಚವ್ಮ । ಅವಳ್ಹೀಗ
ಪರುಷೆಗಿದಿರಾಗಿ ಬರುತಾಳೆ....॥

ಹೊತ್ತು ಒಳ್ಳೆದೆಂದು ಹತ್ಯಾಳೆ ಗೊಂಬೆ ಹೊಸತೇರ....॥
ಮುತ್ತುಗದ ಹೂವಿನಂಗೆ ಬೆವರೂತ। ಹುಚ್ಚವ್ಮ
ಅವಳು ಹತ್ಯಾಳೆ ಗೊಂಬೆ ಹೊಸತೇರ....॥

ಯಾಳ್ಯ ಒಳ್ಳೆದೆಂದು ಏರ್ಯಾಳೆ ಈ ತೇರ
ಎಳ್ಳು ಕಾಯಿೀನ ಜಡೆಯೋಳು । (ಜಡೆಯ) ಹುಚ್ಚವ್ಮ
ನಿನ್ ಏರೋಗೊ ರಥವ ನೆನೆದ್ಹೇನು....॥

ದಂಡಿಗ್ಹೋದಾಳೆ ದುಂಡ ಮುತ್ತ ಕಟ್ಟಿಸ್ಯಾಳೆ
ದಂಡಿಗೆಲ್ಲಾ ವಾಲೆ ಬರೆದಾಳೆ । ಹುಚ್ಚವ್ಮ
ಮೈಸೂರ ಅಂದಲವನ್ನೇರಿ ಮೆರೆದಾಳೆ....॥

ಪಟ್ಟಣಕೆ ಹೊರಟಾಳೆ ಪುಟ್ಟಮುತ್ತ ಕಟ್ಟಿಸ್ಯಾಳೆ
ಪಟ್ಟಣಕೆ ವಾಲೆ ಬರೆದಾಳೆ । ಹುಚ್ಚವ್ಮ
ಮೈಸೂರ ಪಟ್ಟಣದಾನೆ ಏರಿ ಮೆರೆದಾಳೆ....॥

# ಪುಟ್ಟಮಾರಿ ಕುರಿತು....

ಗದ್ದೂಗೆ ಮೇಲಿಂದ ಎದ್ದು ಬಾರೇ ಪುಟ್ಟಮಾರಿ
ಇದ್ದಾರೆ ನಿನಗೆ ಶಿವನಾಣೆ । ಶೀರೇವ್ದ
ನಾನು ನೊಗ್ಗು ತಂದಿವ್ನಿ ಮುಡಿಬಾರೇ....॥

ಗದ್ದೀಗೆ ಪೂಜಾದೊ ಗರತ್ಹೀಯ ಬರಹೇಳಿ
ಮೇಲೆ ಪಿಲ್ಲೇಯ ಮನೆಯೋಳು। (ಮನೆಯ) ಪುಟ್ಟಮಾರಿಯ
ಗದ್ದೀಗೆ ಪೂಜಾದೊ ಬರಹೇಳಿ....॥

ಕತ್ತಿ ಕೊಡಿರಮ್ಮ ಚುಚ್ಚಗಣ್ಣ ಮಾರ್ಥೀಗೆ
ಕತ್ತಿ ಮೇಲತ್ಹಿ ಮೆರೆಯೋಳೆ । (ಮೆರೆಯೊ) ಪುಟ್ಟಮಾರೀಗೆ
ಕತ್ತಿಕೊಟ್ಟಯ್ಯ ಸುಖಿಬಾಳು....॥

ಥಾರುವರ ಬೀದಿಗೆ ಹೋಗಿ ಬಾರೇ ಪುಟ್ಟಮಾರಿ
ಹವಳ ತುಂಬ್ಯವರೆ ಮನೆಯಲ್ಲಿ । ಪುಟ್ಟಮಾರಿ
ಹವಳ ತುಂಬ್ಯವರೆ ಮನೆಯಲ್ಲಿ....॥

ಉತ್ತುಮರ ಕೇರೀಗೆ ಹೊರಟಾಳೆ ಪುಟ್ಟಮಾರಿ
ಮುತ್ತು ತುಂಬ್ಯವರೆ ಮನೆಯಲ್ಲಿ । ಪುಟ್ಟಮಾರಿ
ಹೋಗಿಬಾರೇ ಕಾಲ ಘಳಿಗ್ಹೀಲಿ....॥

ಇರಿಯ ನಾಗರದಲ್ಲಿ ಇರುವೇನೆ ಪುಟ್ಟಮಾರಿ
ಬರುವ್ಹೇನೆ ನಮ್ಮ ಸ್ವಪ್ನಾಕೆ । ನೀವು ಕಂಚೀನ
ಹರೆಯ ಕುಂಡೋಗಿ ಕರೆತನ್ನಿ....॥

ಒಪ್ಪತ್ತಿನ್ಹೂಟ ಚುಚ್ಚೀದ ಬಾಯಿಬೀಗ
ಉಕ್ಕೊ ಹೊಳೆಯಲ್ಲಿ ಬರಲಾರೆ । ಪುಟ್ಟಮಾರಿ
ನೀವು ಒಪ್ಪೀಸಿ ಕೊಳ್ಳಿ ಹರಕೇಯ....॥

ಮೂಗೂತಿ ಮುರಿದಂದು ಯಾಕಳುತಿ ಪುಟ್ಟಮಾರಿ
ಮೂಡಾಲಗ್ಯವನೆ ನಿಮು ಅಣ್ಣ । ತಿಗಳರ ತಿಮ್ಮಯ್ಯ
ಮೂಗೂತಿ ಮುತ್ತು ಬಿಗಿಸ್ಯಾನು....॥

ಮೂಗೂತಿ ಮುರಿದಾರೆ ಯಾಕಳುತಿ ಪುಟ್ಟಮಾರಿ
ದೇಶನಾಳೋನು ನಿಮು ಅಣ್ಣ । ಕಂಡಾರೆ
ಲೇಸಾದ ಮುತ್ತ ಬಿಡಿಸ್ಯಾನು....॥

ಮೂಗೂತಿ ಮುರಿದಾರೆ ಮುರಿದು ಮಾಡಿಸಬಹುದು
ಹರುಳಾದರೆ ಹರುಳ ಹಾಕಿಸಬಹುದು । ಪ್ರಾಣೆಕದ
ಹರುಳಾದರ್ಯಾರೆ ಬೆಸೆಯೋರು....॥

ಹಾದಿ ಗುಡಿಸೀರಿ ಬೀದಿ ಹೆಣ್ಣುಮಕ್ಕಾಳೆ
ಹಾದೀಗೆ ಮುತ್ತು ಅರವೀರಿ । ನನ್ನೂರ
ರಾಣಿ ಬಂದು ಊರು ಹೋಗುತಾಳೆ....॥

ಹಟ್ಟೆಗುಡಿಸ್ಹೀರಿ ಪುಟ್ಟಹೆಣ್ಣು ಮಕ್ಕಾಳೆ
ಹಟ್ಟೀಗೆ ಮುತ್ತು ಅರವೀರಿ । ನನ್ನೂರ
ಪುಟ್ಟ ಬಂದು ಊರು ಹೋಗುತಾಳೆ....॥

ಊರು ಮುಂದೊಂದು ಬೂಗುರದ ಮರವಿಲ್ಲಾ
ಊರಿನಲಿ ಶಂಖೀನ ಧ್ವನಿಯಿಲ್ಲಾ । ಪುಟ್ಟಮಾರಿ
ನೀನು ಯಾವ ನಿಧಿಯೆಂದು ನೆಲಗೊಂಡೆ....॥

ಹೆಬ್ಬಾಕಿಲಲ್ಲಿ ಅಬ್ಬರವೇನಿರಮ್ಮ
ಒಬ್ಬತಾಯೀಗೆ ಒಬ್ಬಮಗನುಟ್ಟ । ನಿನ ಮಗ
ಹೆಬ್ಬೂಲಿ ಹೊಡೆದು ಬರುತಾನೆ....॥

ಆರತಿಯ ಹಿಡಿದು ಅಂಗಯ್ಯಿನೊಂದಾವು
ಮುಂಗಯ್ಯಿ ಅವಳ ಜಡಿದ್ಹೇವು । ಪುಟ್ಟಮಾರಿ
ಮುಂದಕ್ಕೇ ಮೂರ್ಹೆಜ್ಜೆ ದಯಮಾಡಿ....॥

ಕಾಲು ತೊಳೆಯಲು ಬನ್ನಿ ಕನ್ದಲಾರತಿಯ ತನ್ನಿ
ಬಾಳೇಯ ಹಣ್ಣು ಗೊನೆನೂರು । ತಂದವಗೆ
ಅವಳು ಬಾಲ ಸಂತಾನ ಕೊಡುತಾಳೆ....॥

ಗುಡಿಗೆ ಬರುತ್ತೀನಿ ಹಿಡಿಯೆ ನಾಗರಹಾವ
ಬೀದೀಲಿ ಆಡೋದು ಬಿಲ್ಲೂರಿ ಹಾವೇನೆ । ಪುಟ್ಟಮಾರಿ
ನಿನ್ ನರಿಗೇಯ ಮೇಲಾಡೋದು ಏಳುಸುತ್ತಿನ ಎಳೆನಾಗ॥

ಗೋದಿ ನಾಗರಮರಿಯ ಬೀದೀಗೆ ಯಾಕೆ ಬಿಟ್ಟಮ್ಮ
ಬೀದಿ ಮಕ್ಕಳು ಹೆದಿರ್‍ಯಾವು । ಪುಟ್ಟಮಾರಿ
ನೀನು ಜೋಗುಳವ ಹೇಳಿ ಕರೆಕೊಳ್ಳೆ....॥

ಸಿಳ್ಳೆನಾಗರಮರಿಯ ಮುಳ್ಳಿಗ್ಯಾಕೆ ಬಿಟ್ಟಮ್ಮ
ಮುಳ್ಳೀಗೆ ಹೋದೋರು ಹೆದಿರ್‍ಯಾರು । ಪುಟ್ಟಮಾರಿ
ನೀನು ಸಿಳ್ಳಾನೆ ಹಾಕಿ ಕರೆಯಮ್ಮ....॥

ಪುಟ್ಟನಾಗರಮರಿಯ ಹಟ್ಟಿಗ್ಯಾಕೆ ಬಿಟ್ಟಮ್ಮ
ಹಟ್ಟೀಲಿ ಇರುವೋರು ಹೆದಿರ್‍ಯಾರು । ಪುಟ್ಟಮಾರಿ
ನೀನು ಲೊಟ್ಟಾನೆ ಹಾಕಿ ಕರೆಯಮ್ಮ....॥

ಹಾಲ ಕಾಸ್ಯಾರೆ ಅರಿವಾಣ ಬೆಳಗ್ಯಾರೆ
ನೀವು ಬೇಗನ್ಹೇಳಿ ಅವುಸಾರ । ಕ್ಯಾತನಹಳ್ಳಿ
ಹಾಲುಕೋಣದಲ್ಲಿ ಅಯಿಭೋಗ....॥

ತುಪ್ಪ ಕಾಸ್ಯಾರೆ ಬಟ್ಟಾಲ ಬೆಳಗ್ಯವರೆ
ನೀವು ತಟ್ಟನೆ ಏಳಮ್ಮ ಅವುಸಾರ । ಕ್ಯಾತನಹಳ್ಳಿ
ತುಪ್ಪಕೋಣದಲ್ಲಿ ಅಯಿಭೋಗ....॥

ಬಾಳೆಹಣ್ಣ ಬಾಗಿಲಲ್ಲಿ ಹೀಡಾಡುತ್ತಾ
ಬಾಲೆ ನಿನ್ ತೋಳ ತಿರುವೂತ । ಪುಟ್ಟಮಾರಿ
ಬಾಲ ರಾಜ್ಯವಕೆ ಇಳಿದಾಳು....॥

ಹೊಸನೀರು ಬಂತು ಒಳಿಗ್ಹೋಳಿ ಪುಟ್ಟಮಾರಿ
ಚಿಕ್ಕಟ್ಟಿ ತುಂಬಿ ಕೊಳತುಂಬಿ । ಹೇಮಗಿರಿ
ಹೊಳಿತುಂಬಿ ಕೋಡಿ ಹರಿದಾವು....॥

ಹೊಳೆಯ ದಡದಲ್ಲಿ ಹೊಂಗೇಯ ತೋಪಿನಲ್ಲಿ
ಗಂಡುಗಾಸ್ಹೀನ ಹಲಗೀನ । ಸೇವೆ ಆಗುವಾಗ
ಅಲ್ಲಿ ಪುಟ್ಟ ಮಾರೀಗೆ ಹುಸಿನಗೆ....॥

ಹೊಳೆಯ ದಡದಲ್ಲಿ ಹೊಂಗೇಯ ತೋಪಿನಲ್ಲಿ
ಆಲಜಾಲಾದ ಮರದಡಿಯ । ಪುಟ್ಟಮಾರಿ
ಆವಳು ಮೆಳೆಗೊಂದು ಮೊಗ್ಗು ಮುಡಿದಾಳೆ....॥

ಹೊತ್ತಾಯ್ತು ತಾಯಿ ವತ್ತಲ್ಲಿ ಒಬ್ಬರಿಲ್ಲಾ
ಹೊತ್ತಿದ್ದರ್ಹೇನು ಬಯವಿಲ್ಲಾ । ಪುಟ್ಟಮಾರಿ
ಅವಳು ವತ್ತಲ್ಲಿ ವ್ವಾಲಾಡಿ ಬರುತಾಳೆ....॥

ಸಂಜಾಯ್ತು ತಾಯಿ ಸಂಜೇಲಿ ಒಬ್ಬರಿಲ್ಲಾ
ಸಂಜೆಯಾದರ್ಹೇನು ಬಯವಿಲ್ಲಾ । ಪುಟ್ಟಮಾರಿ
ಅವಳು ಸಂಗದಲಾಡಿ ಬರುತಾಳೆ....॥

ನಡೆಮುಡಿಯ ಮೇಲೆ ನಡೆದು ಬಾರೇ ಪುಟ್ಟಮಾರಿ
ನಡೆಮುಡಿ ತಪ್ಪಿದರೆ ಪಡಿಹೊನ್ನು । ಪುಟ್ಟಮಾರಿ
ನೀನು ನಡೆದು ಬಾರೆ ನವಿಲಗರಿಯಲ್ಲಿ....॥

ಯಾಕೆ ಪುಟ್ಟಮಾರಿ ಕೋಪ ನನ್ನ ಮೇಲೆ
ನಾ ತಂದು ಕೊಡುವೆ ನಿನಗೊಂದ । ಅಗ್ಗಣಿಸಂತೆ
ತಗ್ಹಿನಲಿ ಬೆಳೆವ ಜವನಾವ....॥

ಹಳ್ಳಕೊಳ್ಳದ ನೀರು ಬೆಳ್ಳಿಯ ಕೈಚಂಬು
ಆಲ್ಲಿ ಪುಟ್ಟಮಾರೀಗೆ ಶಿವಪೂಜೆ । ಆಗುವಾಗ
ಬೆಳ್ಳೀಯ ಘಂಟೆ ಢಣಿರೆಂದೊ....॥

ಏರಿ ಹತ್ಯಾಳೆ ನೀರನೆ ನೋಡ್ಯಾಳೆ
ಏರಿ ನೀರೀಗೂ ಸಮನೆಂದು। (ಸಮನೆಂದ) ಪುಟ್ಟಮಾರಿ
ಏರ್ಯಾಳೆ ಗೊಂಬೆ ಹೊಸತೇರ....॥

ಬಾಗಿಲ ಕಡೆದ ಬಡಗೀಗೆ ಏನುಕೊಟ್ಟೆ ಪುಟ್ಟಮಾರಿ
ಅಗುರಕೊಟ್ಟೆ ಅಡಕೇಯು। ಕೊಡಗ್ಡೀಯು
ನಾನು ಗದ್ದೇಯ ಕೊಟ್ಟೆ ಬಡಗೀಗೆ....॥

ಕಟ್ಟೆ ಹಿಂದಾಲ ಪುಟ್ಟ ಕಣಿಗಲಹೂವೆ
ತಟ್ಟಿತೆಗೆದಿಡೆ ಗೌರಾಜಿ। ನಿನ ಮಗ
ಅವನು ರಾಜ್ಯಾವನಾಳಿ ಬರುತಾನೆ....॥

ಏರಿ ಹಿಂದಾಲ ದ್ವಾರ ಕಣಿಗಲ ಹೂವೆ
ನಾರು ತೆಗೆದೀಡೆ ಗೌರಾಜಿ। ನಿನ ಮಗ
ರಾಜ್ಯಾವನಾಳಿ ಬರುತಾನೆ....॥

ಗುಡಿಗೆ ಬರುತ್ತೀನಿ ಹಿಡಿಯೆ ನಾಗರಹಾವ
ಅವರು ಗುಡಿಗೆ ಬಂದೋರು ಹೆದರ್ಯಾರು। ಪುಟ್ಟಮಾರಿ
ನೀನು ಮುಚ್ಚೆ ಏಳೆಡೆ ಸರ್ಪಾನ....॥

ಕುಣಿಯೋನ ಕುಣಿತಕ್ಕೆ ಬಡಿಯೋನ ಬಡಿತಕ್ಕೆ
ದೋಣು ಬಡಿಯೋನ ಗಡಿಗಡಿಗೆ। ಪುಟ್ಟಮಾರಿ
ತಾನೊಂದು ಕುಣಿತ ಕುಣಿದಾಳೆ....॥

ಮೆಲ್ಲಾಗೆ ಕುಣಿಯಯ್ಯ ಚೆಲ್ಲಿಕಾಲೀರಯ್ಯ
ಚೆಲ್ಲೇವು ಬಾಗಿ ನಡುಬಾಗಿ। ಕುಣಿದಾರೆ
ನಾವು ಚೆಲ್ಲೀಗೆ ಮುತ್ತು ಬಿಡಿಸ್ಯೇನು....॥

ತಾಳೆ ಮರದಲ್ಲಿ ಚಿಗಿರೊಡೆದ ಹೊಂಬಾಳೆ
ತಾಯಿ ಮಾರವ್ವ ಮಾಡಿಬಾರೇ....ಮುಡಿಬಾರೇ।

ಅಕ್ಕ ಮುಡಿಬಾರೇ ಅಕ್ಕಿ ಹೊಂಬಾಳೀಯ
ಚಿಕ್ಕಮರದಲ್ಲಿ ಚಿಗುರೊಡೆದೊ....ಚಿಗುರೊಡೆದೊ ।

ಮಂಗಳ್ವಾರ ಮಾರುದ್ದ ಹೊತ್ತಿನಲ್ಲಿ ಶೃಂಗಾರವಾದ ಕ್ಯಾತನಳ್ಳಿ
ಶೃಂಗಾರವಾದ ಕ್ಯಾತನಹಳ್ಳಿ। ಬೀದೀಲಿ
ರಂಬೆ ಮಾರವ್ನ ಎಳೆವಾರ....॥

ಎಳೆವಾರ ಬರುವಾಗ ಎತ್ತೀನ ಚಂದವನೋಡಿ
ಕೊಂಬೀಗೆ ಜಂಬುಕೊರಳೀಗೆ । ಹೂವಿನಮಾಲೆ
ಬಂದಾ ಮಾರವ್ನ ಎಳೆವಾರ....॥

ಬಂಡಿ ಬಂಡಿ ಬಂದೊ ಕೊಂಡಾಕೆ ಸೌದೆ ಬಂದೊ
ಬಂದೊ ಎಳೆವಾರ ನೆಲೆಗೊಂಡೊ....ನೆಲೆಗೊಂಡೊ ।

ಕೊಂಡ ಕೊಣವಾದೊ ಕೆಂಡ ತಾವರೆಯಾದೊ
ಕೊಂಡಾದ ಸೌದೆ ಮುಗಿಲುದ್ದ....ಮುಗಿಲುದ್ದ....॥

ಮುಂಗೊಂಡ ಸೌದೆ ಮುಗಿಲುದ್ದ ಬೇಯ್ವಾಗ
ಗಂಗೆ ಮೀಯಾಕೆ ತಡೆದಾಳೆ....ತಡೆದಾಳೆ....।

ಇಂಬೀಯ ಕೊಣಕೆ ರಂಬೆ ಮಜ್ಜಣಕೋಗಿ
ಯಾರು ಕರೆದಾರೆ ಬರಲೊಳ್ಳು । ಮಾರವ್ವ
ನೀನು ಹೋಗಿ ಕರೆಯೊ ಮಡಿವಾಳಿ....।

ನೀನು ಹೋಗಿ ಕರೆಯೊ ಮಡಿವಾಳಿ....ಮಾರವ್ವ
ನಡೆ ಮುಡಿಲವಳು ಬರುತಾಳೆ....ಬರುತಾಳೆ....।

ತಾವಾರೆ ಕೊಣಕೆ ತಾಯಿ ಮಜ್ಜಣಕೋಗಿ
ಯಾರು ಕರೆದಾರೆ ಬರಲೊಳ್ಳು । ಮಾರವ್ವ
ನೀವು ತಾಳೆನಾಲ್ಹೀಸಿ ಕರೆತನ್ನಿ....॥

ಮಜ್ಜಣಕೆ ಹೊತ್ತ್ತೋಯ್ತು ಎದ್ದು ಬಾರೇ ಮಾರವ್ವ
ಮೊಗ್ಗು ತಂದಿವ್ನಿ ಮುಡಿಬಾರೇ....ಮುಡಿಬಾರೇ....।
ಗೆಜ್ಜೆ ತಂದಿವ್ನಿ ಮೆರೆಬಾರೇ....ಮೆರೆಬಾರೇ....।

ಏರಿಮೇಲೆ ನಿಂತುಕೊಂಡು ಯಾರ ನೋಡಿ ಮಾರವ್ವ
ದೂರ ಹೋಗ್ಯವನೆ ನಿನಮಗ ನಿನಮಗ....ಶೇಡೀರಣ್ಣ
ಪೂಜೀಗೆ ಹೊಂಬಾಳೆ ತರುತಾನೆ....ತರುತಾನೆ....।

ಹಾದೀಲಿ ಯಾಕುನಿಂತೆ ಆರೂತಿ ಮುಖದೋಳೆ
ಹಾರ ತೋಟ ಕೋಗ್ಯವನೆ ನಿನಮಗ....ನಿನಮಗ ಶೇಡೀರಣ್ಣ
ಪೂಜೀಗೆ ಹೊಂಬಾಳೆ ತರುತಾನೆ....ತರುತಾನೆ....।

ಏರೀಮೇಲೆ ನಿಂತುಕೊಂಡು ನೀರಾಳ ನೋಡ್ಯಾಳೆ
ಏರೀಗೂ ನೀರು ಸರಿಯೋಳೆ । ಮಾರವ್ವ
ಏರೀಯ ಕೆಳಗೆ ಎಳೆಬಾಳೆ ಸುಳಿಬಾಳೆ....।

ಮದರಂಗದ ಬಾಳೆಗೊನೆ ಬಾಳೆ....ಮಾರವ್ವ
ಮದರಂಗದ ಬಾಳೆಗೊನೆ ಬಾಳೆ....ಮಾರವ್ವ
ನಿನ್ ಹಬ್ಬದೊತ್ತಿಗೆ ಇಡಿಬಾಳೆ....ಇಡಿಬಾಳೆ....।

ಹಾಳುದ್ದ ನೀರಲ್ಲಿ ಗೇಣುದ್ದ ಕೆಸರಲ್ಲಿ
ಹಾಲಿದ್ದರ್ಯಾರೆ ನಿನ ಮಗ । ಶೇಡೀರಣ್ಣ
ಹಾಲುಕೊಂಡು ಶೆಡಿಗೆ ಬರುತಾನೆ....॥

ತಾಯಿ ಮಾರವ್ವ ಏನೇನ ಬಗಿಸ್ಯಾಳೆ
ತೋಟಾದ ಅಡಕೇಯ । (ಅಡಕೆ) ಹೊಂಬಾಳೇಯ
ತಾಯಿ ಮಾರವ್ವ ಭವಸ್ಯಾಳೆ....ಭವಸ್ಯಾಳೆ....।

ಅಡ್ಡ ಕುಂಕುಮದೋಳೆ ಹಸಿರುಪಚ್ಚದೋಳೆ
ದೊಡ್ಡೋರ ಬೀದೀಲಿ ಮೆರೆಯೋಳೆ । ಮಾರವ್ವ
ನಿನ್ಗೆ ದೊರೆಗಳು ಕೈಎತ್ತಿ ಮುಗಿದಾರು....॥

# ಮಲೆನಾಡಿನ ದೀವಳಿಗೆ ಹಾಡುಗಳು

ಸುವೀರೊ ಸಂಗಯ್ಯ ಸುವೀರೊ ಲಿಂಗಯ್ಯ
ಸುವ್ವೆಂದು ಬಾರೊ ಬಸವಯ್ಯ । ನೀನು
ಸುವ್ವೆಂದು ಬಾರೊ ಬಸವಯ್ಯ....॥

ಬಡಗಲು ಬಂಕಾಪುರ ದೊಡ್ಡರಾಡೊರಾಜ
ದೊಡ್ಡ ದೊರೆರಾಯ್ನ ಅರಮನೆ । ಬಾಗಿಲ ಮುಂದೆ
ಒಡ್ಡು ದಾಟೋದು ಬೆಳಗಾದೊ....॥

ಚಿಕ್ಕ ಬಂಕಾಪುರ ಚಿಕ್ಕರಾಡೊರಾಜ
ಚಿಕ್ಕ ದೊರೆರಾಯ್ನ ಅರಮನೆ । ಬಾಗಿಲು ಮುಂದೆ
ಅಗಸಿ ದಾಟೋದು ಬೆಳಗಾದೊ....॥

ಅಗಸಿ ತೆಗಿಸಯ್ಯ ಬೊಗಸುಳ್ಳ ನಮ್ಮಯ್ಯ
ಬಗೆಷ್ಠೀಲಿ ಹೊನ್ನ ಬಿಳಿಯಾಲೆ । ಕೋಟೇಲಿಬರುವ
ಪಂಚ ಪಾಂಡವಗೆ ಹಿಡಿವೀಳ್ಯ....॥

ಪಂಚ ಪಾಂಡವಗೆ ಹಿಡಿವೀಳ್ಯ....ಇಡಿಕೊಂಡು
ಅಗಸಿ ತೆಗಿಸ್ಯಾರೆ ಬಗೆಸೊಳ್ಳಿ ।
ಅಗಸಿ ತೆಗಿಸ್ಯಾರೆ ಬಗೆಸೊಳ್ಳಿ ನಮ್ಮಯ್ಯ....॥

ಹೆಬ್ಬಾಕೀಲು ಕೀಲು ಗುಬ್ಬಿ ಜಂತದ ಕೀಲು
ಹೆಬ್ಬೂಲಿ ಕರಡಿ ಮನೆಮಾಡೊ । ಈ ಮನೆಯ
ಆಳ ಬಿಟ್ಟು ತಾಳ ತೆಗಿಸ್ಯಾರೆ....॥

ಬಾಗೀಲು ತೆಗಿರಮ್ಮ ಬಾಗ್ಯುಳ್ಳ ಲಕ್ಷ್ಮಮ್ಮ
ಜ್ಯೋತೀಯನೊಳಗೆ ಕರೆಕೊಳ್ಳಿ । ನೀವು
ಜ್ಯೋತೀಯನೊಳಗೆ ಕರೆಕೊಳ್ಳಿ....॥

ಬಾಗೀಲು ತೆಗಿಯಾಕೆ ಬಾಲಯ್ಯ ಬಿಡಲಿಲ್ಲಾ
ನಾ ಹೇಗೆ ಬಾಗೀಲು ತೆಗಿಯಾಲಿ
ನಾ ಹೇಗೆ ಬಾಗೀಲು ತೆಗಿಯಾಲಿ....||

ಬಾಲೆ ಬಿಡದಿದ್ರೆ ನಿಮ್ಮ ರಾಯರ ಕೈಲಿ ಕೊಟ್ಟು
ಕಿತ್ತಾಲೆ ಹಣ್ಣು ಸುಲಿಕೊಟ್ಟು । ಮೆಲುಕೊಟ್ಟು
ನೀವು ಗಾಡಾನೆ ಬಾಗೀಲು ತೆಗೀರಮ್ಮ....||



ಬಾಲೆ ಬಿಟ್ಟಾರೆ ಚಿನ್ನಯ್ಯ ಬಿಡಲಿಲ್ಲಾ
ನಾ ಹೇಗೆ ಬಾಗೀಲು ತೆಗೆಯಲಯ್ಯ
ನಾ ಹೇಗೆ ಬಾಗೀಲು ತೆಗೆಯಲಯ್ಯ....||

ಚಿನ್ನಯ್ಯ ಬಿಡದಿದ್ರೆ ನಿಮ್ಮ ಪುರುಷರ ಕೈಲಿಕೊಟ್ಟು
ಹುತ್ತುತ್ತೆ ಹಣ್ಣ ಸುಲಿಕೊಟ್ಟು । ಮೆಲುಕೊಟ್ಟು
ನೀವು ಗಾಡಾನೆ ಎದ್ದು ಬಾಗೀಲು ತೆಗೀರಮ್ಮ....||

ನೀವು ಗಾಡಾನೆ ಎದ್ದು ಬಾಗೀಲು ತೆಗಿರಮ್ಮ...ಈ ಮನೆಯ
ಜ್ಯೋತಮ್ಮನೊಳಗೆ ಕರೆಕೊಳ್ಳಿ....ನೀವು
ಜ್ಯೋತಮ್ಮನೊಳಗೆ ಕರೆಕೊಳ್ಳಿ....||

ಉಪ್ಪರಗೆಯೊಳಗೆ ಕಾಲ್ಹೇಣಿ ಹಾಕಿ
ಸಾಲು ಕೊಡದೆಣ್ಣೆ ಮಗೆತಂದು । ನೀವ್ಹೀಗ
ಜ್ಯೋತಮ್ಮಗೆಣ್ಣೆ ಎರೆದ್ಹೋಗಿ....||

ಎಣ್ಣೆ ಎರೆದಾರೆ ಪುಣ್ಯಾವು ನಿಮಗಾದೊ
ಮುಂದೆ ಶಿವನಲ್ಲಿ ಫಲವಾದೊ । ನಿಮಗೆ....
ಮುಂದೆ ಶಿವನಲ್ಲಿ ಫಲವಾದೊ....||

ಹಾಲುಬಾನವುಂಡು ಸ್ಯಾಲೆಜ್ಯೋತ್ರವನೊದ್ದು
ಸಣ್ಣಮಾಳೀಗ್ಹೆಲಿ ಸುಖನಿದ್ರೆ । ಪಾಡ್ಹೀರಿ
ನೀವು ಲಾಲೀಸಿ ಕೇಳಿ ಪದಗಳ....||

ಲಾಲ್ಹೀಸಿ ಕೇಳಿ ಪದಗಳ ಕೇಳಿಕೊಂಡು
ಇಲ್ಲಿಗೆದ್ದು ಬನ್ನಿ ಜಗಲೀಗೆ । ನಮ್ಮಯ್ಯ
ನಾಲ್ಕುಜನಕೆ ಒಂದಿಳ್ಳೇವ ಕೊಡಬೇಕು....॥

ಇಳ್ಳೇವ್ದ ಮಾತೀಗೆ ಒಪ್ಪೋರು ನಾವಲ್ಲಾ
ಸಾಲೆ ಚಿತ್ತಾರ ಸೇರುಹೊನ್ನು । ಕೊಟ್ಟಾರೆ
ನಾವು ಹಾಡೂತ ಚಾವಡೀಯ ಇಳಿದ್ಹೇವು....॥



# ಬೆಳ್ಳೀಯ ಕೋಲೆ ಸುಖನಿದ್ರೆ

ಬೆಳ್ಳಿಗುಡ್ಡದಮೇಲೆ ಬೆಳ್ಳೀಯ ಕಾಯೋರೆ
ಬೆಳ್ಳೀಯ ಕೋಲೆ ಸುಖನಿದ್ರೆ । ನಿಮಗೆ
ಬೆಳ್ಳೀಯ ಕೋಲೆ ಸುಖನಿದ್ರೆ....॥

ಅಡವ್ಹೀಲಿ ಹಾಡ್ಯಾವೆ ಮಡುವಲಿ ಕಾಕೊಡೆದಾವೆ
ನಿದ್ರೆ ಬಂದಲ್ಲಿ ವುಲಿಗ್ಯಾವೆ । ನಮಗೋವು
ಸಾಕೆಂಬ ಹಾಲು ಕರೆದಾವೆ....॥

ಸಾಕೆಂಬ ಹಾಲ್ಹೀಗೆ ಸರವುುತ್ತಿನ ಕಡೆಗೋಲು
ವಜ್ರಮಾಣಿಕದ ಉಗಿನೇಣು । ತಕ್ಕೊಂಡು
ವ್ಹಾಲಾಡಿ ವೊಸರ ಕಡೆಯೋರೆ....॥

ವ್ಹಾಲಾಡಿ ವೊಸರ ಕಡೆಯೊ ನಮ್ಮಮ್ಮಾನ
ವಾಲೆ ಬೆಳಕಾಲಿ ಮಗನೆದ್ದು....। ಜೋಗುಳಪಾಡಿ
ರಾಗ ಪಟ್ಟಣವೆ ಬೆಳಗಾದೊ....॥

ಮಾಣಿರೆ ಒಳಗೆ ಮಗನ ತೊಟ್ಟಲು ಕಟ್ಟೆ
ಬೋರಾಡಿ ಹಾಲು ಕಾಸೋರೆ । (ಕಾಸೊ) ನಮ್ಮಮ್ಮಾನ
ಬಂಧೀಯ ಬೆಳಕ್ಹೀಗೆ ವುಗನೆದ್ದು....॥

ಬಂಧೀಯ ಬೆಳಕ್ಹೀಗೆ ವುಗನೆದ್ದು–ಜೋಗುಳ ಪಾಡಿ
ಚಿಕ್ಕ ಪಟ್ಟಣವೆ ಬೆಳಗಾದೊ....॥

ಉಪ್ಪರಗೆ ಒಳಗೆ ತುಪ್ಪಕಾಸೊ ಅಮ್ಮಾನ
ಕೋಪ್ಪೀನ ಬೆಳಕೀಗೆ ಮಗನೆದ್ದು । ಜೋಗುಳ ಪಾಡಿ
ರಾಜ ಪಟ್ಟಣವೆ ಬೆಳಗಾದೊ....॥

# ನಾರಾಯಣಸ್ವಾಮಿ ಹಾಡುಗಳು

ಮುಂಗೋಳಿ ಕೂಗಿದಾವೋ ಮೂಡು ಕೆಂಪೇರಿದಾವೊ
ನಾರಾಯಣಸ್ವಾಮಿ ರಥವೇರಿ । ಬರುವಾಗ
ನಾಡೆಲ್ಲಾ ಚಿನ್ನ ಹೊಳೆದಾವೊ....॥

ಹೊತ್ತಿಗೆದುರಾಗಿ ಹುಟ್ಟನಲ್ಲೊ ನಾರಾಯಣಸ್ವಾಮಿ
ಹುಟ್ಟು ಬಂಜೇರ ಪರವಾಗಿ । (ಪರದ) ಹೊನ್ನಾಗಿ
ಅವನು ಹುಟ್ಟಿದಾನೊ ಸ್ವಾಮಿ ಜಗದೊಡೆಯ....॥

ಮುಂದಿ ಮುಂದಿ ಎಂದು ನಂಬಲಿ ಹೋದಾ
ಮುಂದಿ ಬಿಟ್ಟಾರು ನಡುನೀರ । ನಾರಾಯಣಸ್ವಾಮಿ
ತಂದೆ ನನ್ನ ಕಯ್ಯ ಬಿಡಬೇಡ....॥

ಬಂದ ಕಷ್ಟಕಾಯೋ ಬಂಜೇರಿಗೆ ಮಕ್ಕಳ ಕೊಡೊ
ಕಂಬಾಕೆ ಕಟ್ಟಿಸಿನ್ನಿ ಕಪಿಲೇಯ । (ಕಪಿಲೆ) ಕಾಳೋರಿಯ
ನಾನು ಬಸವಣ್ಣ ಬಿಡಿಸಿನ್ನಿ ಎಳೆಗರುವ....॥

ಹಣ್ಣುಕಾಯಿ ಪೂಜೆ ಚಿನ್ನಾದಿ ಬೇಗೋನೆ
ಬರಲಾರೆ ನಿಮ್ಮ ದರುಶನಕೆ । ನಾರಾಯಣಸ್ವಾಮಿ
ನೀ ಒಪ್ಪಿಸಿಕೊಳ್ಳಿ ಹರಕೇಯ....॥

ಹೂವಿನಲ್ಲಿ ಹುದುಗ್ಯಾನು ಹೂವಿನಲ್ಲಿ ಮಲಿಗ್ಯಾನು
ಮೊಗ್ಗಾಗೆ ಕಣ್ಣು ತೆರೆದಾನೆ । (ತೆರೆದಾನು) ನಾರಾಯಣಸ್ವಾಮಿ
ನಿನ್ನ ನೋಡಿದಕೆ ನಿದ್ದೆ ಬಯಲಾದೊ....॥

ಪಾದ ತೀರ್ಥವ ಸಲಿಸಿ ಪಾವನಾಯಿತು ಜನುಮ
ರೋಮ ರೋಮವೆಲ್ಲಾ ರವಿಚಿನ್ನ । ನಾರಾಯಣಸ್ವಾಮಿ
ನಿಮ್ಮ ಪಾದದಲಿ ಕಂಡೆ ಪರಶಿವನ....॥

ಮೂಡು ಮುನ್ನಾಗಿ ಮೂಡ್ಯನಲ್ಲೊ ನಾರಾಯಣಸ್ವಾಮಿ
ಕಿವುಡ ಮೂಡರಿಗೆ ಹೊನ್ನಾಗಿ । (ಹೊನ್ನೀನ) ಮರವಾಗಿ
ಅವನು ಮೂಡ್ಯನಲ್ಲೊ ಸ್ವಾಮಿ ಜಗಕೆಲ್ಲಾ....||

ಮೂಡಾಲನಾಡಯ್ಯ ನೋಡಯ್ಯ ಬಡಸ್ತಾನ
ಮೂಡಾಲಗದ್ದೆ ಮುಗಿಲುದ್ದ ಬೆಳೆದಾರೆ । ನಾರಾಯಣ
ನಾನು ಮಾಡೂವೆ ನಿಮಗೆ ಹರಿಸೇವೆ....||

ಕಲ್ಲುಗುಡಿಯಯ್ಯ ನಾನು ಕರೆದಾರೆ ಮಾತಾಡೊ
ಚಿನ್ನದ ಗುಡಿಯು ಕನ್ನೆಕಾರ । ನಾರಾಯಣಸ್ವಾಮಿ
ನೀನು ಚಿನ್ನಕ್ಕೆ ನಮ್ಮನೆಗೆ ದಯವಾಗೊ....||

ಹೊತ್ತು ಮುಳುಗಿದರೇನು ಕತ್ತಲಾದರೇನು
ಅಪ್ಪ ನಿನ್ನ ಗುಡಿಗೆ ಬರುವೇನು । ನಾರಾಯಣಸ್ವಾಮಿ
ನೀನು ಮುತ್ತೀನ ಬಾಗಿಲು ತೆರದೀರು....||

ನಾವು ಇಕ್ಕೊಂಡು ನಡುಮನೇಲಿ ಕೂತಿರುವ್ರ
ಯಾರೆಂದು ನನಗೆ ಅರಿಯಾಲಿ । (ಅರಿಯಾದು) ನಾರಾಯಣ
ನೀನು ತೋರಯ್ಯ ನಿನ್ನ ನಿಜರೂಪ....||

ನಿಜರೂಪ ತೋರಿದರೆ ಹೆದರಿಯಲ್ಲೆ ಹೆಣ್ಮಗಳೆ
ಎಡದಿಂದ ಬಲಕೆ ತಿರುಗಮ್ಮ । ಹೆಣ್ಮಗಳೆ
ನಿನಗೆ ತೋರೇನು ನೂರೊಂದು ಅವತಾರ....||

ಅರಂಪಡವೀಲಿ ಅಲೆದೆ ಹಾಡಿ ಹಾಡಿ ಕೂಗೀದೆ
ಓ ! ಎನ್ನಬಾರಾದೆ ನನ ಗುರುವೆ । ನಾರಾಯಣಸ್ವಾಮಿ
ನಾ ನಿನ್ನ ಕೂಗಿ ದಣಿದೇನೊ....||

ಹಕ್ಕಿಯಂಗರಚೀದೆ ಪಕ್ಷಿಯಂಗೆ ತಿರುಗೀದೆ
ಗಿಡುಗನಾಗಿ ಗಿರಿಯ ಬಳಸೀದೆ । ನಾರಾಯಣಸ್ವಾಮಿ
ನಿಮ್ಮ ಪಾದಾವ ಕಾಣಾದೆ ಅಳುತಿದ್ದೆ....||

ಆಕಾಶದಡವೀಲಿ ದೂಪಾದ ಹೊಗೆಎದ್ದು
ಆಗೋಯ್ತು ನಾರಾಯಣ್ನ ಪಾದಪೂಜೆ । ಗುಡಿಯಲ್ಲಿ
ಆಕಾಶದ ಘಂಟೆ ಡಣಿರೆಂದೊ....॥

ಹಳ್ಳಕೊಳ್ಳಾದಲ್ಲಿ ದೊಡ್ಡೋರಬೀದಿಲ್ಲಿ
ಎಲ್ಲೆಲ್ಲೂ ನಿನ್ನ ಹರಸೀದೆ । ನಾರಾಯಣಸ್ವಾಮಿ
ನೀನು ಎಲ್ಲಿ ಹೋದಪ್ಪ ನನ ಬಿಟ್ಟು....॥



# ಕುಟುಂಬ

ಹೆಣ್ಣೀಗೆ ತವರೂರು ರಸಬಾಳೆ ಹಣ್ಣಂತೆ
ಮಲೆನಾಡು ತುಡುಬಿ ಜೇನಂತೆ । ತಾಯೀಯ
ಎದೆ ಹಾಲು ರುಚಿಯ ಸವಿದಂತೆ....॥



‘ ತಂಗ್ಯಮ್ಮ ಬರುತಾಳೆ ತವರೀಗೆ.......’

# ನಿನ್ನಾಸೆ ನನ್ನ ಬಿಡದಲ್ಲೆ....

ಅತ್ತು ಹಾಡಿದರವ್ವ ದುಃಖ ಮಾಸಾದವ್ವ
ನಿನ್ನ ಬಿಟ್ಟಿಂಗೆ ನಡೀಲವ್ವ । (ನಡಿಯಾಲಿ) ಹೆತ್ತವ್ವ
ನಿನ್ನ ಬಿಟ್ಟರಘಳಿಗೆ ನಾನು ಇರಲಾರೆ ॥

ಮಳೆ ಬಿಟ್ಟಾರು ಮಳೆಹನಿ ಬಿಡದು ತಾಯವ್ವ
ನೀ ಬಿಟ್ಟಾರು ನನ್ನ ಮನಬಿಡದು । ಹೆತ್ತವ್ವ
ಎಂದೂ ನಿನ್ನಾಸೆ ನನ್ನ ಬಿಡದಲ್ಲೆ ॥

ತಂಗ್ಯಮ್ಮ ಅಳಬೇಡ ತಾಯವ್ವ ಅತ್ತಾಳು
ಹೋಗಿ ಬರುತೀನಿ ನನ ತಂಗೆ । ಮನೆಯಲ್ಲಿ
ನೀ ಒಪ್ಪಾಗಿ ಬಾಳಿ ನಡಿಯವ್ವ ॥

ಕಲ್ಲುಕಂಬದ ಮುಂದೆ ನೆತ್ತಿಗಣ್ಣೀರೆರಿಸ್ಯಾಳು
ಕಣ್ಣಿನಲ್ಲಿ ನೀರು ಸುರಿಸ್ಯಾಳು । ತಂಗ್ಯಮ್ಮ
ಹೆಣ್ಣು ಆದನೆಂದು ಅತ್ತಾಳು ॥

ಹುಟ್ಟಿದ ಮನೆಯ ನಾನೆಲ್ಲಿ ತೊರೆದೇನು
ನಡುಮನೆ ಜ್ಯೋತಿ ಉರಿಯೋತನಕ । ಅಣ್ಣಯ್ಯ
ನಾನು ಅಲ್ಲಗಿಲ್ಲಿಗೆ ನಡೆದೇನು ॥

ಹೆಣ್ಣೀಗೆ ತವರೂರು ರಸಬಾಳೆ ಹಣ್ಣಂತೆ
ಮಲೆನಾಡು ತುಡುಬೆ ಜೇನಂತೆ । ತಾಯೀಯ
ಎದೆ ಹಾಲು ರುಚಿಯು ಸವಿದಂತೆ ॥

ಸಿರಿತಾನ ಉಕ್ಕಾಲಿ ಸಿರಿವಂತರಾಗಾಲಿ
ಸೀಮೆಯಲ್ಲಿ ಅಣ್ಣ ಮೆರೆಯಾಲಿ । ತೌರೀಗೆ
ಕೊಳಗದ ಹೊನ್ನು ಸಿಕ್ಕಾಲಿ ॥

ಭೀಮಾರ್ಜುನರಂಥ ತಮ್ಮಂದಿರಿರುವಾರು
ದ್ರೌಪತಿಯಂತ ಮಡದೀಯು । ಸಿಕ್ಕಾಲಿ
ಈ ಮನೆ ತುಂಬ ಭಾಗ್ಯ ಕರೆಯಾಲಿ ॥

ಐಶ್ವರ್ಯ ಉಕ್ಕಾಲಿ ಐವಾರು ಬಾಳಾಲಿ
ಅಣ್ಣಯ್ನ ಸಿರಿಯು ಬೆಳಗಾಲಿ । ತವರಲ್ಲಿ
ಕುಡಿಕೇಯ ಹೊನ್ನು ಸಿಕ್ಕಾಲಿ ॥

ಬಳಗಾವು ಹೆಚ್ಚಾಲಿ ಬಂದಾನ ತಗ್ಗಾಲಿ
ಕೊಳಗದಲಿ ಹೊನ್ನು ಅಳೆಯಾಲಿ । ತೌರೀನ
ನಡುಮನೆ ಜ್ಯೋತಿ ಉರಿಯಾಲಿ ॥

ತೌರೂರವರು ಹೆಚ್ಚಾಲಿ ಬಂದಾನ ತಗ್ಗಾಲಿ
ಅಣ್ಣಯ್ನ ಜನರು ಸುಖಿಯಾಗಿ । ತೌರೀಗೆ
ರಾಯೂರು ದಿನ ನಿತ್ಯ ಹೋಗಿ ಬರುತಿರಲಿ ॥

ಹತ್ತು ಸಾವಿರವಾಗಲಿ ಕಿತ್ತಲೆ ಬನವಾಗಾಲಿ
ಅಕ್ಕದೀರಿಗೆ ತೌರು ಮನೆಯಾಗಾಲಿ । ಅಣ್ಣಯ್ನ
ಮನೆ ಹೆಚ್ಚೊಕ್ಕಲಾಗಿ ಸುಖಿಯಾಗಾಲಿ ॥

ಒಂದು ಸಾವಿರವಾಗಾಲಿ ನಂದನವನವಾಗಲಿ
ತಂಗೇರಿಗೆ ತೌರುಮನೆಯಾಗಾಲಿ । ಅಣ್ಣಯ್ನ
ತೌರಲಿ ಹಿಂಡೊಕ್ಕಲಾಗಿ ಬದುಕಾಲಿ ॥

ಅಕ್ಕ ಬದುಕಿದರೇನೆ ಕಕ್ಕೆ ಕವಿದರೇನೆ
ಲಕ್ಷಿಪತಿಯೆಂಬ ತೌರೂರು । (ತೌರೂರ) ಅಣ್ಣಯ್ಯದೀರು
ಬದುಕಿದರೆ ಎಚ್ಚಾಳ ನಮ್ಮ ಮನದಲ್ಲಿ ॥

ಯಾರು ಬದುಕಿದರೇನು ಹೀರೆ ಕವಿದರೇನು
ಧೀರವಂತೆಯೆಂಬ । (ತೌರೂರು) ತೌರೂರ ಅಣ್ಣಯ್ಯದೀರು
ಬದುಕಿದರೆ ಬೀರೇವು ನಮ್ಮ ಮನದಲ್ಲಿ ॥

ಅತ್ತೆ ಅತ್ತತ್ತ ಅಳಿಯದೀರು ಹೆಚ್ಚಾಲಿ
ಮುತ್ತೀನ ವನದಲ್ಲಿ ಗಿಳಿಯಿಂಡು । ಹೆಚ್ಚಿದಂಗೆ
ಹೆಚ್ಚಾಲಿ ನಮ್ಮ ತೌರೂರು ॥

ನಮ್ಮ ನಾಡೋರು ಮಣ್ಣಾಗಿ ಹೋಗಾಲಿ
ಕೆಮ್ಮಣಿನಂಗೆ ಕೆದರಾಲಿ । ತೌರವರು
ದಾಳಿಂಬೆ ಹಣ್ಣು ಬಿರಿದಂಗೆ ಬಿರಿಯಾಲಿ ॥



# ತಂಗ್ಯವ್ಮ ಬರುತಾಳೆ ತವರೀಗೆ....

ಇಂಬೆ ಹಣ್ಣಿನಂಗೆ ತುಂಬಿದ ಪಟ್ಟಣದಂಗೆ
"ತಂಗ್ಯವ್ಮ ಬರುತಾಳೆ ತವರೀಗೆ" । ಬ್ಯಾಡಾರಯ್ಯ
ನೀನು ತಿಂಗಳೀಗೆ ಸೀರೆ ನೆಯ್ಯಿ ಕೊಡೊ....॥

ಈದ ನಾಯಂಗೆ ಕಾದ ಕಬ್ಬಿಣದಂಗೆ
ನಾದನೀ ಬರುತಾಳೆ ತವರೀಗೆ । ಬ್ಯಾಡಾರಯ್ಯ
ನೀನು ನಾಳೀಕೆ ಸೀರೆ ನೆಯ್ಯಿ ಕೊಡೊ....॥

ಕಣ್ಣು ತಿರುವಿದ ಕಂಡು ನಡುವೆ ಬಾಗಿಲಿಗೆ ಬಂದು
ಹಡೆದವ್ವ ಬಂದು ತಡೆದಾಳೊ । (ತಡೆದು) ಏನಂದಾಳು
ತವ್ಮಯ್ಯ ಬೆಳೆದವನೆ ಸಣ ಬತ್ತ....॥

ತವ್ಮಯ್ಯ ಬೆಳೆದವನೆ ಸಣ ಬತ್ತ ತಗರಿಬೇಳೆ
ನೀ ಉಂಡೋಗು ಕಂದ ತಡೆದಿಲ್ಲ । ನಿನ್ನನ್ನು
ನೀ ಉಂಡೋಗು ಕಂದ ತಡೆದಿಲ್ಲಾ ।

ಈರೆ ಹೂವಿನಂಗೆ ಈಗ ಕಾಸಿದ ತುಪ್ಪ
ನಾನು ಈಗ ಕಾಸಿದ ತುಪ್ಪ । ತಾಯವ್ವ
ನಾನು ಉಂಡು ಬಂದೆ ತಾಯಿ ಹಸಿವಿಲ್ಲಾ....॥

ಹಣ್ಣು ಹಾಲಿಗಿಂತ ಬೆಣ್ಣೆ ತುಪ್ಪಕ್ಕಿಂತ
ಚನ್ನಾಗಿ ಕಳಿತ ರಸಬಾಳೆ । ಹಣ್ಣಿಗಿಂತ
ಚನ್ನ ಕಾಣಕ್ಕ ತೌರೂರು....॥

ತವರೂರ ದಾರೀಲಿ ಕಲ್ಲಿಲ್ಲ ಮುಳ್ಳಿಲ್ಲ
ಸಾಸುವೆಯಷ್ಟು ಮರಳಿಲ್ಲ । ತಾಯವ್ವ
ಬಾನಲಿ ಬಿಸಲೀನ ಬೇಗೆ ಸುಡಲಿಲ್ಲ....॥

ಬಡಗು ಬಾಗಿಲುಮನೆ ದಿಡುಗದ ಕಂಬಸಾಲೆ
ಎತ್ತಗು ನೋಡಿದರು ಆಪರಂಜಿ । ಅಪ್ಪಾನಮನೆ
ನಾನು ಬಿಟ್ಟು ಹೋಗಾಕೆ ಮನಸಿಲ್ಲಾ....॥

ಅತ್ತತ್ತನಾಗಾಲಿ ಅಳಿಯದೀರು ಹೆಚ್ಚಾಲಿ
ಕಪ್ಪುಪಾಂಡವರು ನಾಡೀನ ಕೌರವರು । ಹೆಚ್ಚಿದಂಗೆ
ತೌರೂರ ನಮ್ಮಪ್ಪಾನ ಮನೆ ಹೆಚ್ಚಾಲಿ....॥



# ಅವನು ಧರ್ಮರಳಿಯ ದೊರೆಮಗ

ಯಾರ ಮಗನಮ್ಮ ಸೇರು ಬೆಳ್ಳಿ ಉಡುದಾರ
ವಾರೆ ವಜ್ರಾದ ಯಜಮಾನ । ತಮ್ಮಯ್ಯ
ಅವನು ಧರ್ಮರಳಿಯ ದೊರೆಮಗ....॥

ದೊರೆಮಗ ಬರುವಾಗ ಸುರಿದಾವೆ ಮಲ್ಲಿಗೆ
ದೊರೆಬಂದು ಊರು ಹೋಗುವಾಗ । ಯಾಲಕ್ಕೀ
ಗೊನೆಬಾಗಿ ನೆಲಕೆ ಸುರಿದಾವೆ....॥

ಯಾಕಂತ ಆಡೂತ ಎಲೆಯ ನಾರೆಬ್ಬೂತ
ಯಾಕೆ ಅಕ್ಕಯ್ಯ ಬಡವಾದೆ । (ಬಡವಾದ) ಸುದ್ದಿಕೇಳಿ
ಕೋಪದಿಂದಿಳಿದ ಕುದರೇಯು....॥

ಕೋಪುಗಾರ ತಮ್ಮಯ್ಯ ಕೊಳ್ಳೊ ಕಾಲಿಗೆ ನೀರ
ಬಾಯಗಳ ಇಳ್ಳೀವ ಉಗಿಯಯ್ಯ । ನಾನು ತೌರೂರ
ದಾರೀಯ ನೋಡಿ ಬಡವಾದೆ....॥

ಹಾಲಿಗಕ್ಕಿ ಹಾಕಿ ನೀರಿಗೆ ನಾ ಹೋದೆ
ದೂರಲಿಂದ ಕಂಡೆ ಕುದುರೇಯು । ತಮ್ಮಯ್ನ
ನಿನ್ನ ಕಾಲಾಳು ಕಂಡು ಹಿಂತಿರುಗೀದೆ....॥

ಆಳಾಳಿಗೆಲ್ಲಾ ಬಾಳೇಯ ಎಲಿಯಾವೆ
ಮೇಲಾಳಿಗೆಲ್ಲಾ ತಣಿಗಾವೆ । ತಮ್ಮಯ್ಯ
ನಿಮಗಾವೆ ಚಿನ್ನದರಿವಾಣ....॥

ತಮ್ಮಾನ ಬರಹೇಳಿ ತಣಿಗೇಲಿ ಉಣ್ಣೋನ
ಒಂದೀಗೆ ನೂರೆಲೆ ಮೆಲುವೋನ (ಮೆಲುವೊ) ತಮ್ಮಯ್ನ
ಬಂದಾರೆ ಬರಹೇಳಿ ಬಾಣವರದ ಮೇಲೆ....॥

ಬಂದಾರು ಬರಹೇಳಿ ಬಾಣವರದ ಮೇಲೆ
ಕುಂದೂರ ಮೇಲೆ ಕುದುರೇಯು । ಏರಿಕೊಂಡು
ಬಂದರು ನಮ್ಮಣ್ಣ ಮಗದೀರು ॥

ನಡುವೆ ಬಾಗಿಲಲ್ಲಿ ನೆಲಕ್ಕಿ ಘಮ್ಮೆಂದೊ
ನೆನೆದಂಗೆ ಬಂದ ನನ ತಮ್ಮ । ಬಾಳೀಯ
ಗೊನೆಯಂಗೆ ತೋಳ ತಿರುವೂತ ॥

ನಾಗಮಂಗಲದ ಗಾರೆ ಚಾವಡಿಯೊಳಗೆ
ನಾರೆಬ್ಬಿ ಎಲೆಯ ಮೆಲುವೋನೆ । (ಮೆಲುವೊ) ತಮ್ಮಯ್ಯ
ನಾನು ನೋಡಬೇಕೆಂದು ಬರಹೇಳಿ ॥

ಬರಹೇಳಿ ಬಡವಾದೆ ಹೇಳಿ ಕಳುಹಿಸಣ್ಣಾದೆ
ಬಾಳೆ ಎಲೆಯಂಗೆ ಬಳುಕೀದೆ । (ಬಳುಕಿ) ತಮ್ಮಯ್ಯ
ನಾನು ನೋಡಬೇಕೆಂದು ಬರಹೇಳಿ ॥

ಅಡಗಿನ ತವರೂರು ದಿಡಗದ್ದೇರಿಯಮೇಲೆ
ಒಡೆದು ಜೋತುರವ ಉಡುವೋನೆ । (ಉಡುವೋ) ತಮ್ಮಯ್ಯ
ನಿಮ್ಮುಡದಾರವೆಲ್ಲಾ ಅಪರಂಜಿ ॥

ನಮ್ಮೂರ ಮುಂದೆ ನೆನ್ನೆ ಹೋದವನ್ಯಾರೆ
ಸಾಲುಗುದುರೇಯ ಸರದಾರ । ತಮ್ಮಯ್ಯ
ನಿನ್ನ ಸಾಲುದೀವೀಗೆ ಬೆಳಕಾದೋ ॥

ಅಟ್ಟಣಚಂದ ಬೆಳ್ಳೂರು ಚಂದ
ದರಿವಾಂಗದ ದನಿಚೆಂದ । ದಡಿಗಾದ
ಚಾವಾಡಿಯೊಳಗೆ ನಮ್ಮೂರ ತಮ್ಮಯ್ಯ ದನಿಚೆಂದ ॥

# ನೀನಿದ್ರೆ ನಮಗೆ ಐಭೋಗ

ಗೆದ್ರುಕಾಣೊ ನನ್ನ ಗೆಜ್ಜೆ ಕಾಲಣ್ಣದೀರು
ಗೆಜ್ಜೆಕಟ್ಟ ಬಂಡಿ ಒಡೆಯೋರು। (ಒಡೆಯೊ)ಅಣ್ಣಯ್ಯದೀರು
ಗೆದ್ರುಕಾಣೋ ಗಿರಿನಂಥಿ ದುರುಗಾವ....॥

ಸೋತಾರು ಕಾಣೊ ಸೋದರ ಮಾವಯ್ಯದೀರು
ಸೋಲುಕಟ್ಟ ಬಂಡಿ ಒಡೆಯೋರು । (ಒಡೆಯೊ) ಮಾವಯ್ಯದೀರು
ಸೋತ್ರುಕಾಣೋ ಸೋಮಂದಿ ದುರುಗಾವ....॥

ಅಡಿಗೆ ಮನೆಗೆ ಅರವತ್ತು ಬಾಕೀಲು
ಅರಿಯೆ ಕಾಣತ್ತೆ ಕೆಲಸಾವ । (ಕೆಲಸೆ) ತೌರೂರೋರು
ಸರಮುತ್ತಿನ ವಾಲೆ ಕಳಿಸ್ಯವ್ರೆ....॥

ಸರಮುತ್ತಿನ ವಾಲೆ ಸೆರಗ್ಡೇಲಿ ಕಟ್ಟಕೊಂಡು
ಹೊರುಬಾರೇ ಸಗಣಿ ಸುರಿಬಾರೇ । ನೀನು
ಹೊರುಬಾರೇ ಸಗಣಿ ಸುರಿಬಾರೇ....॥

ಸಗಣಿ ಸುರಿಯೋಕೆ ಬಡವಾರ ಮಗಳಲ್ಲಾ
ನನ್ನ ಸತಿಗೆ ಸಾವಿರದ ಹಿರಿಯಣ್ಣ । ಹೇಳಿದರೆ
ಅವನು ಬೆಳಗಾಗಿ ಗಾಡಿ ಕಳಿಸ್ಯಾನು....॥

ಪಾಪಿ ಹೊಟ್ಟೇಲುಟ್ಟ ಪಾಪಿಷ್ಟಿ ಕೈಯಿಡಿದು
ರಾಕಾಷಿ ಮನೆಗೆ ಸೊಸೆಯಾದೆ । ನಾನು
ರಾಕಾಷಿ ಮನೆಗೆ ಸೊಸೆಯಾದೆ....॥

ಹಿಂಡು ಬಳಗದಲಿ ಹುಟ್ಟ ದಿಂಡುಗಾರೆ ಮುಳ್ಳಾದೆ
ಕಂಡೋರ ಮನೆಗೆ ಸೊಸೆಯೊದೆ। ತಾಯಮ್ಮ
ದಂಡವೇನೆ ತಾಯುಮ್ಮ ನಿನ್ನ ಎದೆಹಾಲು....॥

## ನೀನಿದ್ರೆ ನಮಗೆ ಐಭೋಗ

ತಾಯಿದ್ರೆ ತವರು ನೀರಿದ್ರೆ ಕೆರೆ ಬಾವಿ
ನೀರಿಲ್ದೆ ಕೆರೆಗೆ ಕರುಹೋಗಿ । ಬಾಯಿಬಡ್ಡಿ
ಗೋಳು ಗೋಳೆಂದೀತು ಶಿವನೀಗೆ....॥

ತಾಯಮ್ಮಿದ್ದಾರೆ ಕೈಲಿ ಎಣ್ಣೆ ಹೊತ್ತೋರು
ಮತ್ತಷ್ಟು ದೂರ ಕಳುವಾರು । (ಕಳುವೋ) ತಾಯಮ್ಮ
ಅವಳು ತಾಯಲ್ಲಾ ಅವಳು ಬಲತಾಯಿ....॥

ತಾಯಲ್ಲಾ ತಾಯಿ ಅವಳು ಬಲತಾಯಿ
ಅವಳು ಬಲತಾಯಿ ಇದ್ದಾರೆ । ನನಗೆ
ಬಾಯಿ ಮಾತಾಡಿ ಕಳುವೋಳು....॥

ಹುಟ್ಟರುಡಬೇಕು ಪುಟ್ಟಾಣಿ ಸೀರೆಯು
ಸುತ್ತ ಕಟ್ಟೆ ನೀರು ಹೊರಬೇಕು । ತಾಯಮ್ಮ
ಅತ್ತೆ ಇದ್ದ ಮನೆಗೆ ಕೊಡಬೇಕು....॥

ತಾಯಿ ಇದ್ದರೆ ಭೋಗ ತಂದೆ ಇದ್ದರೆ ಐಭೋಗ
ಬಾಳೆಗೊನೆಗೆ ನೀರೂದ್ರೆ ಬಲುಭೋಗ । ತಾಯಮ್ಮ
ನೀನಿದ್ರೆ ನಮಗೆ ಐಭೋಗ....॥

ದಾರಿ ದಾರಿಯ ನೋಡಿ ದಾರುವಂದ ನಾ ಸೇರಿ
ಯಾರು ನನ್ನವರು ಬರಲಿಲ್ಲಾ । ತಾಯಮ್ಮ
ನಾ ಶೋಕ ಮಾಡೀದೆ ಶಿವನೀಗೆ....॥

ಆರು ತಿಂಗಳೆ ಆಯ್ತು ಮೂರು ವರ್ಷವೆ ಆಯ್ತು
ಯಾರು ನನ್ನವರು ಬರಲಿಲ್ಲಾ । ತಾಯಮ್ಮ
ನಾನು ಶೋಕ ಮಾಡೀದೆ ಶಿವನೀಗೆ....॥

# ನಾನು ಹೆಣ್ಣುಕೊಟ್ಟೇನು ಬರಹೇಳಿ

ಕುಡಿಗಣ್ಣಾರಿತು ಮನೆಗ್ಯಾರು ಬಂದೋರು
ಗುರಿಗಂಜಿಯಂತ ಕಡುಕೆಂಪು । (ಕಡುಗೆಂಪಿನ) ಅಣ್ಣಯ್ಯ
ಕಡು ಜಾಣಕ್ಕಯ್ನ ಕರೆಯೋಕೆ....॥

ದೊಡ್ಡ ತೌರಿಂದ ದುಗು ಬಿದ್ದು ಅಣ್ಣಯ್ಯಬಂದಾ
ಕಂದನೀಗೆ ಹಾಲು ಎರೆದೇನು । ಅಣ್ಣಯ್ಯ
ನನ್ನ ದೂಳುಗಾರಣ್ಣ ಹೊರಗೀರೋ....॥

ನನ್ನ ದೂಳುಗಾರಣ್ಣ ಹೊರಗೀರೊ....ಅಂದಾರೆ
ಕುಂದೀತು ಅಣ್ಣಯ್ನ ಕಲಿಮುಖ । ಅವನ
ಕುಂದೀತು ಅಣ್ಣಯ್ನ ಕಲಿಮುಖ....॥

ಕುಂದಿದ್ದ ಮುಖಕೆ ಗಿಂಡೀಲಿ ಪನ್ನೀರುಕೊಟ್ಟು
ಸೋಸಲನಾಡಕ್ಕಿ ಜಾಲಿಸ್ಯಾಳಿ । (ಜಾಲಿಸಿ) ಅನ್ನವಮಾಡಿ
ನೀನು ಕೋಪುಗಾರಣ್ಣ ಉಣಬಾರೋ....॥

ಉಂಡು ಬಂದೆ ಊರಲ್ಲಿ ಮಿಂದು ಬಂದೆ ಗಂಗೇಲಿ
ಮೆಲ್ಲಿ ಬಂದೆ ಅಂಗಾಡಿ ಬಿಳಿಯಾಲೆ। (ಬಿಳಿಯಲೆಯ)
ತಂಗ್ಯಮ್ಮ
ನೀನು ಹೆಚ್ಚೊಕ್ಕಲಾಗಿ ಬದುಕಮ್ಮ....॥

ವೀರಾಜಪೇಟೇಲಿ ಸೀರೆ ಬೆಲೆ ಮಾಡೋನು
ನೀಲದುಂಗುರದ ನಿಜಗೆಂಪೆ। (ನಿಜಗೆಂಪಿನ) ತಮ್ಮಯ್ಯ
ನೀರು ಕಾದವೆ ನೀನು ಮೀ ಬಾರೋ....॥

ಕಾದವೆ ನೀರು ನೀನು ಮೀ ಬಾರೋ ತಮ್ಮಯ್ಯ
ಆಗಿದೆ ಅಡಿಗೆ ಉಣ್ಣಕ್ಹೋಗೋ । ತಮ್ಮಯ್ಯ
ಕೂದಾನೆ ಹೂವು ಮುಡಿ ಹೋಗೋ....॥

ಬರಿಯ ನೀರಿಗೆ ಬಂದನೇನೆ ಅಕ್ಕಯ್ಯ
ನಿನ್ ತೊಡೆಯ ಮೇಲಾಡುವ ಅರಗಿಣಿಯ । ಕೊಟ್ಟಾರೆ
ನಾ ವೀರಾಜ ಪೇಟೇಯ ಇಳಿತ್ತೀನಿ....॥

ವೀರಾಜಪೇಟೆಲ್ಲಿ ಹವಳ ಬೆಲೆಮಾಡೋನು
ಹವಳದುಂಗುರದ ನಿಜಗೆಂಪು । (ನಿಜಗೆಂಪಿನ) ಅಣ್ಣಯ್ಯ
ನಾನು ಅಡಿಗೆ ಮಾಡಿವ್ನಿ ಬರಹೇಳಿ....॥

ಬರಿಯ ಊಟಾಕೆ ಬರಬಲ್ಲೆ ಅಕ್ಕಯ್ಯ
ನಿನ್ ತೋಳಾಮೇಲಾಡೊ ಹಸಳೇಯ । (ಹಸಳೆ) ಕಂದನ್ನು
ಕೊಡುತಿನೆಂದಾರೆ ನಾ ವೀರಾಜೆ ಕಣಿವೆ ಇಳಿದೇನು....॥

ತಮ್ಮಾನ ಬರಹೇಳಿ ತಣಿಗೇಲಿ ಉಣ್ಣೋನ
ಒಂದಿಗೆ ನೂರೆಲೆ ಮೆಲುವೋನ । (ಮೆಲುವೊ) ತಮ್ಮಯ್ನ
ನಾನು ಹೆಣ್ಣು ಕೊಟ್ಟೇನು ಬರಹೇಳಿ....॥

ಬಂದಾರೆ ಬರಹೇಳಿ ಬಾಣಾವರದ ಮೇಲೆ
ಕುಂದೂರ ಮೇಲೆ ಕುದುರೇಯ । ಬಿಟ್ಟುಕೊಂಡು
ನಾರಿ ನನ್ನಣ್ಣ ಮಗ ಬಂದಾ....॥

ಮಾತುಗಾರರ ಮಗನೆ ನಾಯಗಾರರ ಅಳಿಯಾನೆ
ನೂತನಗಾತಿಯ ಒಡಹುಟ್ಟು । (ಒಡಹುಟ್ಟೇನ) ಅಣ್ಣಯ್ಯ
ನೀನು ನೀತಿಯಿಂದ ಗೆದ್ದೆ ಎಳೆಹೆಣ್ಣ....॥

ಮಾತ್ನೇಲಿ ಮರವಂತ ನ್ಯಾಯ್ದಲ್ಲಿ ಸಮರಂತ
ಅಂದ ಚಂದದಲಿ ಅರಗಿಣಿ । ತಮ್ಮಯ್ಯ
ಅವನು ಅಂದ ಚಂದದಲಿ ಅರಗಿಣಿ....॥

ಅಂದ ಚಂದದ ಅರಗಿಣಿ....ನಿಂತು
ಮಾತಾಡೊ ನಿಜದ ತಾಳೆಹೂವೆ । ನೀನು
ಕುನ್ತು ಮಾತಾಡೊ ಕುಲದಲ್ಲಿ....॥

ಕುನ್ತು ಮಾತಾಡೊ ಕುಂಕುಮದ ಜಾಲಿಹೂವೆ
ಬುದ್ದಿ ಸಾಲದ ಒಡಹುಟ್ಟಿ । ಅಣ್ಣಯ್ಯ
ನೀನು ಕುನ್ತು ಮಾತಾಡೊ ಕುಲದಲ್ಲಿ....॥



# ನಾನ್ಹೋಗಿ ಬರುತ್ತೀನಿ ತವರೀಗೆ

ತಂಗಿಟ್ಟನುಂಡು ತವರೀಗೆ ಹೋಗುತೀನಿ
ನೆರಮಾನೆ ಗರತಿ ಮನೆಜೋಕೆ....ನೀನು
ನೆರಮಾನೆ ಗರತಿ ಮನೆಜೋಕೆ....॥

ಇಲ್ಯಾರಿಗೇಳೀಯಾ ಇಲ್ಯಾರ್ಗೆ ಕೇಳೀಯಾ
ಅರಮಾನೆ ಮುಂದಿ ಅರುಮುಂದಿ । ಅಣ್ಣಯ್ಯದೀರು
ನೀನು ಹೇಳೋಗೆ ನಾರಿ ಅತಿಗಮ್ಮ....॥

ಆರು ಜನಕೆ ಹೇಳಿವಿನಿ ಮೂರು ಜನಕೆ ಕೇಳಿವಿನಿ
ಕಡೆಯಲುಟ್ಟೇದ ಕಾಮಧೇನು । ಮೈದಾಗೆ
ನಾನ್ಹೇಳಿ ಹೋಯಿತ್ತೀನಿ ತವರೀಗೆ....॥

ಮೂಡಲು ತೋಟದಲಿ ಸುರಿದಿರುವ ರವಿಯಲ್ಲಿ
ಬಾಳೆವನದಲಿ ಚಂದುರಾನ ಕೊಣದಲ್ಲಿ....
ಬಾಳೀಗೆ ನೀರು ಬಿಡುವೋರೆ । (ಬಿಡುವೋ) ಮೈದಯ್ಯ
ನಾನ್ಹೋಗಿ ಬರುತೀನಿ ತವರೀಗೆ....॥

ಹೋಗಿ ಬಾರೋಗಿ ಬಾರೆ ಹೊನ್ನಾಲೆ ಕಿವಿಯೋಳೆ
ನಾಗಭೂಷಣದ ನರಿಗೋಳೆ । ಅತಿಗಮ್ಮ
ನೀವೀಗೋಗಿ ಈಗ ಬರಬೇಕು....॥

ಈಗೋಗಿ ಈಗ ಬರಬೇಕೆ ಮೈದಯ್ಯ
ಈಗ ಬರುವೋಕೆ ಈವೂರ ನಾಡಲ್ಲಾ
ಚಂದರುಗಿರಿಯಾಚೆ ನುಲೆನಾಡು । ಮೈದಯ್ಯ
ನಾವು ತಿಂಗಳ ಹಾದಿ ತಿರುಗ್ತೇವು....॥

ಹತ್ತಿ ಮರದಡಿಯ ಎತ್ತು ಮೇಸೊ ಮಾವಯ್ಯ
ನಾನ್ಹೋಗಿ ಬರುತ್ತೀನಿ ನನ್ನ ತವರೀಗೆ । ಮಾವಯ್ಯ
ನಾನ್ಹೋಗಿ ಬರುತ್ತೀನಿ ನನ್ನ ತವರೀಗೆ....॥

ತೌರಿಗ್ಹೋಗಾಕೆ ಅಳುಕಾಯಿ ಮುರಿಲಾದೊ
ತಿಟ್ಟು ಮೇಗಾಲೆಳ್ಳು ಕುಯಿಲಾದೊ । ನಾದೀನವ್ಮ
ನೀನು ಈಗ್ಹೋಗಿ ಈಗ ಬರಬೇಕು....॥

ನೀನು ಈಗ್ಹೋಗಿ ಈಗ ಬರದಿದ್ರೆ....ಅತಿಗವ್ಮ
ನಾವು ಏಳಲೆ ನಭಕೆ ಇರಿಸ್ಯಾವೆ....ನಾವು
ಏಳಲೆ ನಭಕೆ ಇರಿಸ್ಯಾವೆ....॥

ಹೋದಾಳು ಹೋದಾಳು ಅಪ್ಪಾನ ಅರಮನೆಗೆ
ಬಾಗೀಲು ನೋಡಿ ತಿರುಗ್ಯಾಳು....ಅತಿಗವ್ಮ
ಬಾಗೀಲು ನೋಡಿ ತಿರುಗ್ಯಾಳು....॥

ತಂದೆ ಹಿಂದೆ ಬಿಟ್ಟು ತಾಯ ಮುಂದೆ ಬಿಟ್ಟು
ನಟ್ಟು ನಡುವೇಲಿ ಅತಿಗವ್ಮ । ಬರುತಾಳೆ
ನೀನಿದ್ರೆ ಈ ಮನೆ ಸುಖಿಬಾಳು....॥



## ಬಾರೇ ತಂಗ್ಯಮ್ಮ ತೌರೀಗೆ

ಹಗಲೂರಿಗೆ ಅಣ್ಣಾ ತಂಗೆ ಕರೆಯೋಕೆ ಹೋದಾ
ದುಂಬುಗಾಲಣ್ಣ ಹೊರಗೀರೊ । ಅನ್ನೊಹೊತ್ಗೆ
ಕುಂದೀತು ಅಣ್ಣಯ್ನ ಕಲಿಮುಖ....॥

ಕುಂದೀದ ಅಣ್ಣಯ್ಗೆ ಗಿಂಡೀಲಿ ಪನ್ನೀರು ಕೊಟ್ಟ್ರು
ಕೋಪುಗಾರಣ್ಣ ಉಣುಬಾರೋ....ನೀನು
ಕೋಪುಗಾರಣ್ಣ ಉಣುಬಾರೋ....॥

ಉಂಡುಬಂದೆ ಊರಲಿ ಮಿಂದು ಬಂದೆ ಗಂಗೇಲಿ
ನಾನು ಮಿಂದು ಬಂದೆ ಗಂಗೇಲಿ । ತಂಗ್ಯಮ್ಮ
ನೀನು ಬಾರೇ ಬೇಗ ತೌರೀಗೆ....॥

ತೌರೀಗೆ ಬರುವಾಕೆ ನಾನು ಒಬ್ಬಾಳಲ್ಲಾ
ಎಂಟೆಮ್ಮೆ ಎಂಟು ಕರುವೆಂಟು । ಮರಿಯುಂಟು
ನಾನೆಂಗೆ ಬರಲಿ ಅಣ್ಣ ತೌರೀಗೆ....॥

ಎಂಟೆಮ್ಮೆ ಕಾಯೋಕೆ ಬಂಟಾನ ಕಳುವೇನು
ಎಂಟೆಮ್ಮೆ ಹಾಲು ಕರೆಯೋಕೆ । ತಂಗ್ಯಮ್ಮ
ಮುಂಚೆ ಇನ್ನೊಬ್ಬಾಳು ಮನೆ ಮಗಳು—॥

ಮುಂಚೆ ಇನ್ನೊಬ್ಬಾಳು ಮನೆ ಮಗಳ....ಕಳುವ್ತೇನು
ಬಾರೇ ತಂಗ್ಯಮ್ಮ ತೌರೀಗೆ....ನೀನು
ಬಾರೇ ತಂಗ್ಯಮ್ಮ ತೌರೀಗೆ....॥

ತವರೀಗೆ ಬರುವೋಕೆ ನಾನು ಒಬ್ಬಾಳಲ್ಲಾ
ಹತ್ತೆಮ್ಮೆ ಹತ್ತು ಕರುವಾರು । ಮರಿಹತ್ತು
ನಾನ್ಹೇಗೆ ಬರಲಿ ಅಣ್ಣ ತೌರೀಗೆ....॥

ಹತ್ತೆಮ್ಮೆ ಕಾಯೋಕೆ ಆಳನ್ನು ಕಳುವ್ಹೇನು
ಹತ್ತೆಮ್ಮೆ ಹಾಲು ಕರೆಯೋಕೆ । ತಂಗ್ಯಮ್ಮ
ಮಾಳಮ್ಮನೊಬ್ಬಾಳೆ ಮನೆಮಗಳು....॥

ಮಾಳಮ್ಮನೊಬ್ಬಾಳ ಮನೆ ಮಗಳ....ಕಳುವ್ಹೇನು
ಬಾರೇ ತಂಗ್ಯಮ್ಮ ತೌರೀಗೆ....ನೀನು
ಬಾರೇ ತಂಗ್ಯಮ್ಮ ತೌರೀಗೆ....॥

ಬೇಸಿಗೆ ಬಿಸಿಲಲ್ಲಿ ದೇಶಾದ ಕೆಂದೂಳು
ಲೋಕ ಕಟ್ವಾಣೆ ಮಳೆರಾಯ । ಉಯ್ದಾರೆ
ನಾನ್ಹೇಗೆ ಬರಲೊ ಅಣ್ಣ ತೌರೀಗೆ....॥



# ಹೊನ್ನರಳಿಯಂತ ಒಡಹುಟ್ಟು

ಅತಿಗಮ್ಮ ಅತಿಗಮ್ಮ ನಮ್ಮಣ್ಣಾನ ಬೈಯ್ದೀರ
ಹನ್ನೆರಡು ವರುಷ ತಪಸೀನ । (ತಪಸಿ) ಪಡೆದೇವಲ್ಲೊ
ಹೊನ್ನರಳಿಯಂತ ಒಡಹುಟ್ಟು....॥

ಕುರುಬಾನ ಕುರಿಹೋಗಿ ಮುರುಗದ ತೋಟ ಮೆಯ್ದೊ
ದೊರೆಗೋಳೆ ಹೆಣ್ಗೆ ಬೈಯ್ದೀರ । ತಮ್ಮಯ್ನ
ಮೊಗ್ಗೆಲ್ಲಾ ಮೊಗ್ಗು ನುರಿಯಾದೊ....॥

ಕಡಗದ ಚಂದಕ್ಕೆ ಇಡಿದಾರೆ ಮುಂಗಯ್ಯ
ಬಿಡಿ ಬಿಡಿ ರಾಯಾರೆ ತರವಲ್ಲಾ....ನಿಮಗೆ
ಬಿಡಿ ಬಿಡಿ ರಾಯಾರೆ ತರವಲ್ಲಾ....॥

ಚುಕ್ಕಿ ಬೆಳಕಲ್ಲಿ ಒಕ್ಕಾರೆ ಮೈಸೂರ
ಚಿತ್ತರದ ಬುಕ್ಕು ಬಲಗೈಲಿ । ಇಡಿಕೊಂಡು
ಲೆಖ್ಖ ತಿಳಿಸ್ಯವರೆ ದೊರೆಗಳಿಗೆ....॥

ಮಂಗಳ್ವಾರ ಸಂತೆ ಮಾಮೂಲು ಗಜಪೇಟೆ
ಮುಂಡೆ ಬಿಟ್ಟಕ್ಕಿ ಅಳೆಯೋನೆ । (ಅಳಿಯೊ) ಅಣ್ಣಯ್ಯ
ನಿನ್ ಮುಂಡೇಗೆ ಮಹಾಲಕ್ಷ್ಮಿ ಒಲಿದಾಳೆ....॥

ರಾಶಿ ಅಳೆಯೂತ ಎಳೆಮೀಸೆ ತಿರುವೂತ
ಲೇಪೀನ ಸೂಳೆ ನೆಗಿಸೂತ । ಅಣ್ಣಯ್ಯ
ಅವನು ರಾಶಿ ಅಳೆಯೋದೆ ಬೆಳಗಾಯ್ತು....॥

ಕಟ್ಟೀಯ ನೀರೀಗೂ ಬೆಟ್ಟನುಂಗುರ ಬಿದ್ದೊ
ಹೆತ್ತವ್ವ ನಿನ್ನ ಮಗನೇನೆ । ಅಣ್ಣಯ್ಯ
ಅವನು ಪಟ್ಟಣವ ಗೆದ್ದು ಬರುತಾನೆ....॥

ಹರಿಯೊ ಹಳ್ಳಾಕೆ ಬರಿಯಉಂಗುರ ಬಿದ್ದೊ
ಹಡೆದವ್ವ ನಿನ್ನ ಮಗನೇನೆ । ತಮ್ಮಯ್ಯ
ಅವನು ಹರಿಹರ ಗೆದ್ದು ಬರುತಾನೆ....॥

# ವೈದಯ್ಯ

ಹಾರುವರ ಕೇರೀಲಿ ಗಾರೆ ಚಾವಡಿ ಮೇಲೆ
ಗಾರ ಕಿನ್ನೂಡಿ ನುಡಿಸ್ಹೋನೆ ।(ನುಡಿಸೊ) ವೈದಯ್ಯ
ದೂರು ಬಂದಾವೆ ನಿನ ಮೇಲೆ....॥

ದೂರು ಬಂದಾರೆ ಧೀರನಾಗಿ ನಾನಿರುವೆ
ನಾರಿ ನಿನ್ನ ಮನಸು ಗೆಲಿಮಾಡೆ । ನಾಳೆ ರಾತ್ರೀಕೆ
ನಾನು ರಾಮಾರ ಕಾಳಗವ ಗೆಲ್ಲುಬೇಕು

ವಾಜಗರಟ್ಟೆಲ್ಲಿ ಸೋಜಿಗಏನಮ್ಮ
ಸೂಜೀಯಮೇಲೆ ಗಳಬೀಸಿ । ವೈದಯ್ಯ
ಅವನು ಸೂಳೀಗೆ ಕಟ್ಟೆಸ್ಯವನೆ ಗರಡೀಯ....॥

ಪುಂಡುಗಾರ ವೈದಯ್ಯ ಉಂಡುಬೀದಿಗೆ ಬಂದಾ
ಗಂದದುಡಿ ಪಟ್ಣ ಬಲಗೈಲಿ । ಇಡಿಕೊಂಡು
ಅವನು ಗಂಡನುಳ್ಳಗರತಿ ಮನೆಗ್ಹೋದ....॥

ಗಂಡನುಳ್ಳಗರತಿ ಮನೆಗ್ಹೋಗಿ....ಏನಂದಾನೆ
ಹಾಸೆಂದ ನಾರಿ ಗುಡಿಸೆಂದಾ....ಅವನು
ಹಾಸೆಂದ ನಾರಿ ಗುಡಿಸೆಂದಾ....॥

ಹಾಸಾಕೆ ಗುಡಿಸಾಕೆ ನಾ ಯಾರೋ ನೀ ಯಾರೋ
ಹಸುಮಾನಗಾರ ನನ ವೈದ । ನನ ಕಂಡಾರೆ
ಅವನು ಚಂಡಾಡಿ ತಲೆಯ ಹೊಡೆದಾನೆ....॥

ಕುದುರೆ ಕುಪ್ಪಳಿಸಿ ಚದುರ ಬೀದಿಗೆ ಬಂದಾ
ಚಲ್ಲೀದರ್‍ಯಾರೆ ಸುಗಂಧ । ದೊರೆಮಗನ (ಸುಗುಂದಾವ)
ಮೇಲೆ ಮೇಲೊಬ್ಬಾಳು ರಾಣಿ ಮನಗಿದ್ಳು....॥

## ವೈದಯ್ಯ

ವೈದಯ್ಯ ಮಂತಾರಿ ಐದುಕುದುರೆ ಸರದಾರ
ಐರ್ವಾಲಿ ಮೇಲೆ ಹೊನ್ನು ಕಳಸ । ಮಾಡಿಸಿವ್ನಿ
ನನ್ನ ವೈದಯ್ಯ ಒಂದೂರ ಗುರುಕಾರ....॥

ಭಾವ ತಂದಾ ಬಣ್ಣಾನ ವೈದ ತಂದಾ ರವಿಕೇಯ
ಬಾಗೂರ ಅರಸ ಭಾವಯ್ಯ । ಕಳುವೀದ
ಬಾಗಲೀಗೆ ತಕ್ಕಂತೆ ಹಲಗೇಯ....॥

ಗುರಿಕಾರ ಕಳುವ್ಹೀದ ಕರ್ಪೂರದ ರವಿಕೇಯ
ನನ್ನ ಕನಕ ಸುವ್ವಾರಿ ಹಿರಿಯಣ್ಣ । ಕಳುವ್ಹೀದ
ಕುಸುಲೆ ಹೂವೀನ ಹೊಸ ರವಿಕೆ....॥

ಚಿಕ್ಕ ಓಣೀಲಿ ಚಿಕ್ಕೊಕನೆ ವೈದಯ್ಯ
ಎತ್ತಾಗೂ ನೋಡಿದರೆ ಹಿಡಿಗೋಡೆ । ವೈದಯ್ಯ
ಬಾಗಪ್ಪ ಬಾಳೆ ಸುಳಿಯಂಗೆ....॥

ಹಳ್ಳೀಯ ಅತ್ತೀಗೆ ಒಳ್ಳೇಯ ನಾದೀನಿ
ನನ್ನ ಮಲ್ಲಿಗೆ ತುರುಬೀನ ವೈದಯ್ಯ । (ವೈದಯ್ನ) ಗುಣದಿಂದ
ನಾನು ಹಾಲಿನಂತ ತೌರು ತೊರೆದೇನು....॥

ನನ್ನ ವಾರಗಿತ್ತಿ ಅಕ್ಕಯ್ಯ ಒಳಗೇನೆ ಮಾಡೀಯೆ
ನನ್ನ ಪಾರಪತಿಯೆಂಬೊ ಭಾವಯ್ಯ । ಬಂದವನೆ
ಕಾಲೀಗೆ ನೀರು ಕೊಡೆ ಕಡು ಚಲುವೆ....॥

ಕಾಲಿಗೆ ನೀರು ಕೊಟ್ಟು ಮೇಲೆ ಮಂಚನಾಕಿ
ಭಾವ ರಾಯರಿಗೆ ಉಣಲಿಕ್ಕಿ । ಏನಂದಾಳೆ
ಸಣ್ಣ ಸಂಬಳಿಗೆ ಬಿಳಿಯಾಲೆ....॥

ಬಿಳಿಯಾಲೆ ಕೊಡುವಾಗ ಬಿದ್ದಾವೆ ಕಣ್ಣೀರು
ಯಾಕೆ ಸುರನಾರಿ ಕಡಿಕೆಂಪು....ನಿನಗೆ
ಯಾಕೆ ಸುರನಾರಿ ಕಡಿಕೆಂಪು....॥

ಕಡಿಕೋಪ ನನಗಿಲ್ಲಾ ಕಡಿದುಃಖ ನನಗಿಲ್ಲಾ
ಮುನ್ನೇಳು ಚೇಜಿ ನನಗಿಲ್ಲಾ । ರಾಯಾರೆ
ನೀವ್ಹೇಳಿ ಸೂಳೆ ಅರಮನೆಗೆ....॥

ಒಪ್ಪೇದೆ ಕಾಣೆ ಕಟ್ಟಾಣಿ ನಿನ ಮಾತ
ಬಿಟ್ಟು ಬಿಟ್ಟೆ ಸೂಳೆ ಘಳಿಗೇಲಿ.... ನಾನು
ಬಿಟ್ಟು ಬಿಟ್ಟೆ ಸೂಳೆ ಘಳಿಗೇಲಿ....॥



# ದೂರ ಕೊಟ್ಟೆನೆಂದು ಅಳಬೇಡ

ತಾಯವ್ವ ಬರುತಾಳೆಂದು ದಾರಿ ದಾರಿ ನೋಡೀದೆ
ಜಾಲಾದ ಹೂವಾಗಿ ಸೊರಗೀದೆ । ತಾಯವ್ವ
ನೀನು ದಾಳಿಂಬೆ ಮೊಗ್ಗೆ ಮುಖ ತೋರೆ....॥

ತಾಯವ್ವ ಬರುತಾಳೆಂದು ಹಾದಿ ಹಾದಿ ನೋಡೀದೆ
ಮಲ್ಲಿಗೆ ಹೂವಾಗಿ ಸೊರಗೀದೆ । ತಾಯವ್ವ
ನೀನು ಸಂಪಿಗೆ ಮೊಗ್ಗೆ ಮುಖತೋರೆ....॥

ಬೀದಿ ಬಳಿಸ್ಕೊಂಡು ಬೀದಿಗಾಣೆ ನಾ ಬಂದೆ
ತಾಯಮ್ನು ನಾನು ಒಂದ್ಗೂಡಿ । ಆಡಿದ ಮಾತು
ಹಾಲಿಗೆ ಹೆಪ್ಪು ಎರೆದಂಗೆ....॥

ಊರು ಮುಂದಲ ಹುಣಿಸೆ ತೂಗೀವೆ ಬಾಗೀವೆ
ದೋರು ಕಾಯಾಗಿ ಸುರಿದಾವೆ । ತಾಯಮ್ಮ
ದೂರ ಕೊಟ್ಟೆನೆಂದು ಅಳಬೇಡ....॥

ದೂರ ಕೊಟ್ಟೆನೆಂದು ಅಳಬೇಡ....ತಾಯಮ್ಮ
ಮುಂಕೇನೆ ನಿನಗೆ ಮರುಳೇನೆ । ತಾಯಮ್ಮ
ಹರವೇಯದಂಟು ನೆರಳೇನೆ....॥

ಬೆಟ್ಟಕ್ಕೆ ಬಿದರಾಸೆ ಬಿದರೀಗೆ ಎಲೆಯಾಸೆ
ಹೆಣ್ಣುಮಕ್ಕಳಿಗೆ ತವರಾಸೆ । ತಾಯಮ್ಮ
ನಿನ್ನಾಸೆ ನಮಗೆ ಬಹುಕಾಲ....॥

ದೂರದ ತೌರೆಂದು ಗೋಂಟ್ಟ ಕಣ್ಣೀರು
ಸಾರಂಗ ನವಿಲೆ ಅಳಬೇಡ । ತಂಗ್ಯಮ್ಮ
ದೂರದ ತವರೂರ ಮನೆಚಂದ....॥

ಎಲ್ಲಾ ಅಂಗಡೀಗೂ ಎಳ್ಳು ಜೀರಿಗೆ ಮೇಲೂ
ಬಂಗಾರ ಮೇಲೂ ಬಳೆ ಮೇಲೂ । ತಾಯಮ್ಮ
ಮುತ್ತೈದೆ ಮೇಲೂ ಕಳಸಾಕೆ....॥

ಕೋಡಿ ಕಲ್ಲಳ್ಳಿ ನಾನಿರುವುದು ಗಿಡಸೀಮೆ
ಚಿಂತೆ ಮಾಡಬೇಡ ಮನದಲ್ಲಿ । ತಾಯಮ್ಮ
ನಾನು ಸಂತೋಷದಿ ಓಲೆ ಬರೆತೀನಿ....॥

ತಾಯಿಲ್ದ ತವರೀಗೆ ನಾ ಹೋಗಿ ಫಲವೇನು
ನೂರೊಂದು ಸೌದೆ ಒಲಗಿಕ್ಕಿ । ತಂಗ್ಯಮ್ಮ
ಜ್ಯೋತಮ್ಮನಂತ ಬೆಳಕಿಲ್ಲಾ....॥

ದಾಸವಾಳ್ದ ಹೂವಿನಂಗೆ ದೇಶಕೊಬ್ಬಳಾದೆ
ಕಾಸೀದ ನೀರು ಎರೆಯೋರು । (ಎರೆಯರಿಲ್ಲದ) ವ್ಯಾಲೆ
ಕೂತೇನೆ ತಾಯಿ ಗಂಗೆ ನಿಧಿಯಲ್ಲಿ....॥



# ಮುಡಿದ ಹೂವು ಮೂರು ಜಡೆಯಾದೊ....

ನಾಗಾರ ಹಾವಿನಂತೆ ನಾತಲೆ ಗೋರಿದರೆ
ನಾಲ್ವಾರು ಅಣ್ಣದೀರು ನಡುಮನೇಲಿ । ಕೂತುಕೊಂಡಾಗ
ನಾವು ನಾಗಸಂಪಿಗೆ ಮುಡಿದ್ದೇವು....॥

ಚಂದಾಕೆ ನನ್ನಣ್ಣ ಚಂದ್ರಗಾವಿ ಸುತ್ತಿ
ಇಂದಾಕೆ ಬಿಟ್ಟಕೊನೆ ಸೆರಗ । ಅಣ್ಣಯ್ಯ
ದೊರೆಗಳೊತ್ತೀಲಿ ಬರುವಾಗ....॥

ಹೂವು ಬಂದವಲ್ಲೆ ಹೂಪಾಡಗಿತ್ತೀಗೆ
ಹೂವೀನ ಹೂವ ಮುಡಿಯೊಳಿಗೆ । (ಮುಡಿಯೊ)
ಅಕ್ಕಯ್ಯಾಗೆ
ಹೂವು ಬಂದೊ ನರಸಿಪುರದಿಂದಾ....॥

ಬಳಿಬಂದವಲ್ಲೆ ಬಳಗವುಳ್ಳ ಗರತ್ತೀಗೆ
ಬಳೆಮೇಲೆ ಬಳೆಯು ತೊಡುವಳಿಗೆ । (ತೊಡುವೊ) ಅಕ್ಕಯ್ಯಾಗೆ
ಬಳಿ ಬಂದೊ ಬಂಕಾಪುರದಿಂದಾ....॥

ನನ್ನ ಅಣ್ಣಾ ಬಂದ ನನಗೆ ಬಣ್ಣಾವ ತಂದಾ
ನಿನಗೇನು ತಂದ ಕಿರಿಯೋಳೆ । ತಂಗ್ಯಮ್ಮ
ಅರಳಲಿ ಮಾಗಾಯಿ ಕಳುವೀದ....॥

ದೊಡ್ಡಣ್ಣ ದೊರೆಯೆ ಒಡ್ಡಕ್ಕಿ ಸೌದೆಯಿಲ್ಲಾ
ಒಡ್ಡುವಾನ ಸೀಳಿ ವಲೆಹೂಡಿ । ಅಡಿಗೆನಾಡಿ
ನನ್ನ ದೊಡ್ಡಣ್ಣ ದೊರೆಯೆ ಉಣುಬಾರೋ....॥

ಒಡಹುಟ್ಟ ಕಂಡಾರೆ ಮಡಿಲೇಳು ಬಾಗೀತು
ಮುಡಿದ ಹೂವು ಮೂರು ಜಡೆಯಾದೊ । ಅಣ್ಣಯ್ಯ
ಮರಿ ಜವಳಿಕಡ್ಡಿ ಮುಖ ತೋರೊ....॥

ಒಳಗೆಯಾರೆ ಒಳಗೆ ಒಡ್ಡಿ ಚೆಂಡಾಡೋನೆ
ಒಂದೀಗೆ ಬಂದೋರು ಹಸಿದವರೆ । ಅಣ್ಣಯ್ಯ
ಹರಿಶ್ಚಂದ್ರ ಮಾತಿನ ಬಿಡುಚೆಂಡ....॥

ಮಕ್ಕಳಿಲ್ಲದ ಮನೆ ಮುರುಗ ಇಲ್ಲದ ತೋಟ
ನನ್ನ ಚಿಕ್ಕಣ್ಣ ಇಲ್ಲಾದ ಅರಮನೆ । ಬಾಕಿಲಿಲ್ಲಾ
ನಾನು ಚಿತ್ತಾರಗೇದು ಸಲುವೇನು....॥

ಕೆರೆಯ ತಡಿಯಲ್ಲಿ ಗಿಡುಗ ಮಟ್ಟೆನಿಕ್ಕಿ
ಹೆಣಗಾಡುತಾನೆ ದೊರೆಮಗ । ತಮ್ಮಯ್ಯ
ಗಡಿಯ ಮಾನ್ಯವರ ಮಗಳೀಗೆ....॥



## ತೌರು ನೆನೆದೇವು....

ಗಲ ಗಲ ಮಂದಲಿಗೆ ನವಿಲಾಡು ಪೆಟ್ಟಗೆ
ಕಂಚಿನ ಕನ್ನಡಿ ಜಂತದ ಬಾಚಣಿಗೆ । ಅಕ್ಕಯ್ಯಾಗೆ
ಅಣ್ಣಯ್ಯ ಅಡುಗೂಲಿ ಹೊಡೆದ್ಯಾರೊ....॥

ಅಡುಗೂಲಿ ಒಸಿಯೆಂದು ಅಳುತಾಳೆ ಅಕ್ಕಯ್ಯ
ಬಡಗಲ ಬಾಗ್ಲಲ್ಲಿ ಕಿರಿತಮ್ಮ । ಕೂತ್ಕೊಂಡು
ಕರೆದು ಕರಿಎಮ್ಮ ಹೊಡೆದಾನು....॥

ಎಮ್ಮೆ ನಾ ಒಲ್ಲೆ ಎಳೆಗರವ ನಾ ಒಲ್ಲೆ
ಏರಿಯಿಂದಾಲ ಸಣ್ಣ ಬೈಲುಗದ್ದೇಯ । ಕೊಟ್ಟಾರೆ
ನಾವು ಉಂಡುಂಡು ತೌರು ನೆನೆದ್ಹೇವು....॥

ಜೋಳ ಕೊಟ್ಟರೇನು ಮರ ಹೊನ್ನು ಕೊಟ್ಟರೇನು
ಏರಿಯಿಂದಾಲ ಪಟುಬೈಲುಗದ್ದೇಯ । ಕೊಟ್ಟಾರೆ
ನಾವು ಕುಟ್ಗೊಟ್ತ ತೌರು ನೆನೆದ್ಹೇವು....॥

ಗದ್ದೆ ಬುದ್ದಿಯುಳ್ಳ ಅಕ್ಕಯ್ಯ
ನಿನ್ನ ಮಗನೀಗೆ ಕೊಡುವೆ ಅರಳೆಲೆಯ । ಅಕ್ಕಯ್ಯ
ನಿನ್ನ ಮಗನೀಗೆ ಕೊಡುವೆ ಅರಳೆಲೆಯ....॥

ಅರಳೆಲೆ ಕೊಟ್ಟಾರೆ ನಿನ್ನಳಿಯನ್ಗೆ ಆದಾವು
ನನ್ಗೇನ ಕೊಟ್ಟೀಯೊ ಕಿರಿತಮ್ಮ....ನೀನು
ನನ್ಗೇನ ಕೊಟ್ಟೀಯೊ ಕಿರಿತಮ್ಮ....॥

ನಿನಗೆ ಅಂದಲ ನಿನ್ನಮಗನೀಗೆ ಪಲ್ಲಕ್ಕಿ
ಮುಂದೋಗೊ ಭಾವಯ್ಗೆ ಜೋಡುಕುದುರೆ । ಸೈವಾಗಿ
ಕೊಂಡು ಕೊಡುತೀನಿ ನಡಿಯಕ್ಕ....॥

ಅಣ್ಣಾಗೆ ಅರಮನೆ ತಮ್ಮಾಗೆ ನೆರಮನೆ
ಬಿನ್ನಣ್ಣೆಕಾರಣ್ಣಾಗೆ ಬಿಡಿಮನೆ । (ಬಿಡದಿ) ಕೊಟ್ಟಾರಲ್ಲೆ
ಚೆನ್ನರಾಯಪಟ್ಣದ ವರ್ತಕರು....॥

ಅಣ್ಣಯ್ಯ ಶೆಟ್ಟಿ ಚಿನ್ನಮುರಿದರೆ ಗಟ್ಟಿ
ಸಣ್ಣಯಾಲಕ್ಕಿ ಅಳಿಶೆಟ್ಟಿ । ಬೆಂಗಳೂರ
ಶೆಟ್ಟಿ ವರ್ತಕರ ಮಗನೇನೊ....॥

ಆಲೂರು ಅಕ್ಕಿಚಂದ ಬೇಲೂರು ಬೀದಿಚಂದ
ಮುಂದೆ ಮೈಸೂರು ಮಳಿಗೇಯು । ಬೀದಿಲ್ಲಿ
ಓದೋ ತಮ್ಮಯ್ನ ಧ್ವನಿಚೆಂದ....॥

ಕರಿಯು ಅಂಚಿನ ಸೀರೆ ಕೆರೆಯ ನೀರಿಗ್ಹೋಗೋಳೆ
ಕರಿದಷ್ಟೆ ನಾರಿ ಬಿಳಿದೆಷ್ಟೆ । ಬೆಂಗಳೂರ
ಬೀದೆಷ್ಟೆ ನಾರಿ ನೀನು ಹೊಡೆದ್ಹೇಳೆ....॥

ಕರಿದು ಕನ್ನಂಬಾಡಿ ಬಿಳಿದು ಬೆಂಗಳೂರು
ಸೆರಗು ಸೀರೇವ್ದ ಗಜಪೇಟೆ । ಬೀದಿಲ್ಲಿ
ಓದೋ ತಮ್ಮಯ್ನ ಧ್ವನಿಚೆಂದ....॥



# ನಾ ಹಾಲಿನಡಿಗೆ ಮಾಡಿ ಫಲವೇನು....

ಸೂಳೆಗಾರ ತಮ್ಮಯ್ಗೆ ಹೇಳಲಾರೆ ಬುದ್ಧೀಯ
ಸೂಳೇಯ ಮನೆಯಲ್ಲಿ ಸುಖನಿದ್ರೆ। ಆಗುವಾಗ
ತಾಳೆಯ ಹೂವಿನ ತಲೆದಿಂಬು....॥

ಸೂಳೆ ಸುರುಪಾಣಿ ನಿಮ್ಮಪ್ಪನ್ನೆಲ್ಲಿಗ್ಹೋದಾನೆ
ಚಿಕ್ಕಮಗಳೂರು ಚಿಗುರೇಲೆ । ತಕ್ಕೊಂಡು
ಚಿಕ್ಕೋಳು ಸೂಳೆ ಅರಮನೇಲಿ....॥

ಚಿಕ್ಕೋಳು ಸೂಳೆ ಅರಮನೇಲಿ....ಅವರು
ಗಂಧದುಂಡೆಯಾಗಿ ಮಂಚ ಹೊರಿಗ್ಯವರೆ....ಅವರು
ಗಂಧದುಂಡೆಯಾಗಿ ಮಂಚ ಹೊರಿಗ್ಯವರೆ....॥

ಸೂಳೇಯ ಮನೆಗೆ ಹೋದವನು ಏನಾದ ಎಂತಾದ
ಕಾಡು ನಾಯಾದ ಕಪಿಯಾದ । ತಮ್ಮಯ್ಯ
ಅವನು ಸೂಳೆಕಾಲೀಗೆ ಕೆರವಾದ....॥

ಎಲ್ಲಗ್ಹೋಗಿದ್ದೆ ಯಾವ ಹೂವ ಮುಡಿದಿದ್ದೆ
ಯಾವೋಳ ತೋಳಲ್ಲಿ ಸುಖನಿದ್ರೆ । ತಮ್ಮಯ್ಯ
ನಿನಗೆ ಸೂಳೆ ತೋಳಲ್ಲಿ ಸುಖನಿದ್ರೆ....॥

ಊರು ಮುಂದಾಲ ತೋಟ ಮಾರಬೇಡ ತಮ್ಮಯ್ಯ
ದಾರಾಳಗಿತ್ತಿ ಹಿರಿಯಕ್ಕ । ಕೆರೆಯ ನೀರಿಗ್ಹೋಗಿ
ಅವಳು ಯಾಲಕ್ಕಿ ಗೊನೆಯ ಮುರಿದಾಳು....॥

ಯಾಲಕ್ಕಿ ಗೊನೆಮುರಿದು ಯಾವಡಿಗೆ ಮಾಡ್ಯಾಳು
ಊರಲ್ಲಿ ನನ್ನ ರಾಯರಿಲ್ಲದಮೇಲೆ । ನಾನು
ಯಾವಡಿಗೆ ಮಾಡಿ ಫಲವೇನು....॥

ಹಾಲೀಗೆ ಅಕ್ಕಿಯಾಕಿ ನೀರೀಗೆ ಬೇಳೆಯನಾಕಿ
ಹಾದಿ ಮನೆ ಮನೆಗೂ ತಿರುಗೀದೆ । ನನ ರಾಯ
ನಾನು ಹಾದಿ ಮನೆ ಮನೆಗೂ ತಿರುಗೀದೆ....॥

ನನ್ನ ಹಾಲಿನಂತ ಪುರುಷರು....
ನನ್ನ ಹಾಲಿನಂತೆ ಪುರುಷಾರು । ಬರಲಿಲ್ಲ ಮಹಾಶಿವನೆ
ನಾ ಹಾಲಿನಡಿಗೆ ಮಾಡಿ ಫಲವೇನು....॥



## ನನ್ನ ಬಿನ್ನಾಣೆ ಅಣ್ಣಯ್ನ ಬರಹೇಳಿ

ಹಬ್ಬದೂರಿಗೆ ಹೆಬ್ಬುಲಿಯ ಬರಹೇಳಿ
ಚಿಬ್ಲೇಲಿ ಅಡಕೆ ಚಿಗುರೆಲೆ । ತಕ್ಕೊಂಡು
ನನ್ನೊಬ್ನ ತಮ್ಮಯ್ನ ಬರಹೇಳಿ....||

ಎರಡು ಕೈಗೆ ಮೂರಡಿಯ ಸರಪಾಣಿ
ಗರಡಿ ಮನೆಗ್ಹೋಗಿ ಬರುವೋರ । (ಬರುವೊ) ತಮ್ಮಯ್ನ
ಅವನು ಗರುಡಾಳ ಸ್ವಾಮಿ ತಡೆದಾನೆ....||

ತಡೆಬೇಡ ಸ್ವಾಮಿ ನಿಲ್ಲಕೊತ್ತಿಲ್ಲಾ
ಚಿಕ್ಕ ಪಟ್ಟಣಕೆ ಕರಿಯಕ್ನ । ಕೊಟ್ಟವ್ನಿ
ಅವಳು ಬರಹೇಳಿ ವಾಲೆ ಬರೆದವಳೆ....||

ವಲ್ಲಿ ಹೊದೆಕೊಂಡು ಮಲ್ಲಿಗೆ ಮುಡಿಕೊಂಡು
ಎಲ್ಲಿಗಣ್ಣಯ್ಯ ದೂರ ಪಯಣ । ಹೋಯಿತ್ತೀಯ
ಹರಿದಾರಿಯುಲವಳೆ ಅತಿರಂಬೆ....||

ಹರಿದಾರಿಯುಲವಳೆ ಅತಿರಂಬೆ....ಅಕ್ಕನಮಗಳು
ನನ್ನ ಬರಹೇಳಿ ವಾಲೆ ಬರೆದವಳೆ । ಅಕ್ಕನ ಮಗಳು
ನನ್ನ ಬರಹೇಳಿ ವಾಲೆ ಬರೆದವಳೆ....||

ಯಾರು ಬರದಾದಿಲ್ಲಿ ಧೀರ ಒಬ್ಬನೆ ಬಂದಾ
ಸಾರಂಗ ಬರೆದ ಮಿಕು ಬರೆದ । ಹಾದೀಲಿ
ಧೀರ ನನ್ನವ್ನ ಮಗ ಬಂದಾ....||

ಯಾರ ಮಗನವ್ವ ಜೋಡಂಗಿ ಇಕ್ಕವನೆ
ಬಾಬುಲಾಕ್ಯವನೆ ಬಲಕಿವಿಗೆ । ಅಣ್ಣಯ್ಯ
ಅವನು ಭಾಗ್ಯೇವ್ದ ಮೇಲೆ ಒರಗ್ಯವ್ನೆ....||

ಅಂಗೀಯ ಇಕ್ಯವನೆ ತೆಂಗೀನ ಗರಿಯಂಗೆ
ಕ್ವಾರೆ ಬಿಟ್ಟವನೆ ನವಿಲಂಗೆ । ಅಣ್ಣಯ್ಯ
ಅವನು ಉಂಡುಕುಂತವನೆ ದೊರೆಯಂಗೆ....||

ಚನ್ನಪಟ್ಟಣದ ಬಿನ್ನಾಣಿ ತಂಗ್ಯಮ್ಮ
ಚಿನ್ನದರಿವಾಣ ಬೆಳಗೂತ । ಏನಂದಾಳೆ
ಚೆಂದಾಗಿದ್ದಾರೆ ತೌರೋರು....||

ಚೆಂದಗಿರಾಕೆ ಅವರಿಗ್ಹೇನು ಬಡಸ್ತಾನ
ಹನ್ನೆರಡೂರ್ಹೀನ ಗೌಡೀಕೆ । ಅವರ್ಹೀಗೆ
ಅದರ ಹಂಬಲದಲಿ ನಿನ್ನ ಮರೆತವರೆ....||

ಚನ್ನಪಟ್ಟಣದಿಂದ ಚಿನ್ನದ ಉಂಗುರ ಬಂದೊ
ಚನ್ನಿಗ ಅಣ್ಣಯ್ನ ಬರಹೇಳಿ। ದೊರೆಗಳು
ಚಿನ್ನಾದ ಉಂಗುರವೆ ಕಳಿವ್ಯವ್ರೆ....||

ಮದ್ದೂರಿನಿಂದ ಮುದ್ರೆ ಉಂಗುರ ಬಂದೊ
ನನ್ನ ಮುದ್ದು ಅಣ್ಣಯ್ನ ಬರಹೇಳಿ । ದೊರೆಗಳು
ಮುದ್ರೆ ಉಂಗುರವ ಕಳಿವ್ಯರ್ರೆ....||

ಬೆಂಗೂಳೂರಿನಿಂದಾ ಬೆಳ್ಳಿ ಉಂಗುರ ಬಂದೊ
ನನ್ನ ಬಿನ್ನಾಣಿ ಅಣ್ಣಯ್ನ ಬರಹೇಳಿ । ದೊರೆಗಳು
ಬೆಳ್ಳಿಉಂಗುರವ ಕಳಿವ್ಯರ್ರೆ....||

ಅಕ್ಕನ ಕರೆಯೋಕೆ ಚಿಕ್ಕ ತಮ್ಮ ಶೃಂಗಾರವಾದ
ಚಿಕ್ಕೇರಿ ಮೇಲೆ ಕುದುರೇಯ । ನ್ಹೇರಿಕೊಂಡು
ಅಕ್ಕ ನೂರಾದಿ ಅರಿಯೋನು....||

ಅಂದುಲದ ಮೇಲೆ ಬಂದಿರೊನಿವನ್ಯಾರೆ
ಹಿಂದೆ ತೌರೂರ ಹಿರಿಯಣ್ಣ । ಬಂದವನೆ
ಶಿಂಗಾಳ ಅಪ್ಪಣೆಯು ಕೊಡು ನಮಗೆ....||

ಬೇಸಿಗೆ ಬರಲಿ ಬೆನ್ನು ಬೆಳ್ಳಿತಿರುಗಾಲಿ
ದೀವಳಿಗೆ ಬರಲಿ ದಿನ ಬರಲಿ । ಬೆಲೆಯೆಣ್ಣೆ
ನಿಮ್ಮಪ್ಪನೆ ಬರಲಿ ಕರೆಯೋಕೆ....॥

ಕೇಳಿದೇನಣ್ಣಯ್ಯ ರಾಯರಾಡಿದ ಮಾತು
ಕಲ್ಲೂರಿನಿಂದಾಚೆ ಹೊಸಕೋಟೆ । ಗಂಜಾಮುಪೇಟೆ
ಕದ್ದು ಬರುತ್ತೀನಿ ನಡಿಯಣ್ಣ....॥

ಕದ್ದು ಬಂದಾರೆ ಕಳ್ಳರೆನ್ನುತಾರೆ
ಇನ್ನಾರು ತಿಂಗಳು ಇರುತಂಗೆ । ಗೌರೀಯ
ನಾನು ಹಬ್ಬಾಕೆ ಆಳು ಕಳುವ್ತೇನು....॥

ಆಳು ಕಳುವಿದರೆ ಆಡಿಕೊಳ್ಳುವರವರೆ
ಆನೆ ಮೇಲಾನೆ ಐದಾನೆ । ಹೊಡೆಕೊಂಡು
ನೀನು ಬಾರಣ್ಣ ನನ್ನ ಕರೆಯೋಕೆ....॥



# ತಮ್ಮಯ್ಯನೊಡನೆ ತಂಗ್ಯಮ್ಮ

ಚಂಚಿಗೆ ಅಡಕೆ ತುಂಬಿ ಮಂಚಾಕೆ ತಗಲಾಕಿ
ಚಿಂತೆ ಮಾಡಾನೆ ಇರುಳೆಲ್ಲಿ । ತಮ್ಮಯ್ಯ
ತನ್ನ ಮಂಚಾಕೆ ಮಡದಿ ಬರಲೆಂದು....||

ಮಾತನಾಡಿಕೊಂಡು ಮಂಚಾಕೆ ಬರುವಾಗ
ಯಾತಾರಲಿಟ್ಟೆ ಎಲೆಭೋಗಿ । ತಮ್ಮಯ್ಯ
ನೀನು ಯಾತಾರಲಿಟ್ಟೆ ಎಲೆಭೋಗಿ....||

ಗಂಧದುಂಡೆ ಎಲ್ಲಿಟ್ಟೆ ಗಾಜಿನಭರಣೆ ಎಲ್ಲಿಟ್ಟೆ
ಹಿತ್ತಲಲ್ಲಿರುವ ಮುರುಗಾವ । (ಮುರುಗ) ಪಚ್ಚೆತೆನೆಯ
ನಾನು ಇಟ್ಟೆ ಕಾಣಕ್ಕ ಸರಸಾಕೆ....||

ಸರಸೆಂಬೋದ ಅವಳೇನು ಬಲ್ಲಾಳು
ತೊಟ್ಟಿಲಲ್ಲಿರುವ ಮಗನೆದ್ದು । (ಮಗನೆದ್ದ) ಕೋಪಾಕೆ
ಅವಳು ಕಿತ್ತಿಟ್ಟಾಳು ಕೀಲುಕಡಗಾವ....||

ಕೀಲು ಕಡಗಾವ ಕಾಲಲ್ಲಿ ಮೆಟ್ಟಿಕೊಂಡು
ತಿರುಗಿ ನೊಡ್ಯಾನೆ ಮಡದೀಯ । (ಮಡದಿ)ಮಾವನಮಗನೆ
ತರವಲ್ಲಾ ನಿನಗೆ ಕಡುಕೋಪ....||

ತಾನ ಬಟ್ಟಲ್ಹೂವೆ ನಾನ್ಹೇನು ಅಂದಿದ್ದೆ
ಪಾರ್ವತಿ ಕೊರಳ ಪದಕಾವೆ । ಬಾರೆಂದು
ಪಾಲಿಸು ತಾನೆ ಮಡದೀಯ....||

ಅಣ್ಣಾಗೆ ಅರಮನೆ ತಮ್ಮಾಗೆ ಚಾವಾಡಿ
ಬಿನ್ನಾಣೆ ಅಣ್ಣನಿಗೆ ಬಿಡದೀಯ । ಕೊಟ್ಟಿನ್ಯಾರೊ
ಚನ್ನಪಟ್ಟಣದ ದೊರೆಗಳು....||

## ತಮ್ಮಯ್ಯನೊಡನೆ ತಂಗ್ಯಮ್ಮ

ಹಾರುವಳ್ಳಿಯೋನೆ ಹಸಿರು ಕುವಾಲಿಯೋನೆ ।
ಹಸಿಕೊಂಡು ವಾಲೆ ಬರೆಯೋನೆ । (ಬರೆಯೊ) ತಮ್ಮಯ್ಯ
ನಿನ್ ಹೆಸರು ಮೈಸೂರ್ಗೆ ಗುರಿಯಾದೊ....॥

ಶೆಟ್ಟಿ ನನ್ನಣ್ಣಯ್ಯ ಹುಟ್ಟುಕೊಳ್ಳೊ ಜೊತುರವ
ಶೆಟ್ಟಿಯೋರು ನಿಮ್ಮ ಕರೆದವರೆ । ಕಬ್ಬಳ್ಳಿ
ಪುಟ್ಟ ರಾಜಣದ ಅಳತ್ಹೀಗೆ....॥

ಕರಿಯ ಕಂಬಳಿಗೌಡ ಕೌದಳ್ಳಿಗುರಿಕಾರ
ಬಂಡಳ್ಳಿಗೆ ವಾಲೆ ಬರೆಯೋನೆ । (ಬರೆಯೊ) ಅಣ್ಣಯ್ಯ
ನೀನು ಬಂದೊರ್ತು ನ್ಯಾಯ ಅರಿವಲ್ಲೊ....॥

ಮುದ್ದೂರ ನ್ಯಾಯ ಬಿದ್ದವಲ್ಲೊ ಅಣ್ಣಾನಮೇಲೆ
ಬುದ್ದಿಯುಳ್ಳ ತಂಗೆ ಬಲದಲ್ಲಿ । ಕೂತುಕೊಂಡು
ತಿದ್ಯವಳೆ ಬಾಳೆ ಸುಳಿಯಂಗೆ....॥

ಕ್ವಾರೆ ರುಮಾಲು ಕೊನೆಗೆ ಜಾಜಿಯ ಹೂವು
ಕೋಣವ ಕಾಣವ್ವ ನಿನಮಗ । ಅಣ್ಣಯ್ಯ
ಪುಣಗೀನ ಅಂಗಡೀಲಿ ಒರಗ್ಯನ್ನೆ....॥

ಪುಣಗೀನ ಅಂಗಡೀಲಿ ಒರಗಿದ್ದು ಬರುವಾಗ
ಹಾಲಿಲ್ದೆ ಅನ್ನ ಉಣದಿಲ್ಲಾ । ಅಣ್ಣಯ್ಯ
ಸೂಳೆ ಇಲ್ದೆ ಊರಿಗೆ ಹೋಗದಿಲ್ಲಾ....॥

ಬೇಡ ಬೇಡ ಅಂದಾರೆ ಬೇಡಾತಿ ತಂದವನೆ
ಬೇಡಾತಿ ನನುಕುಲಕೆ ಬೆರೆವಲ್ಲೊ । ಅಣ್ಣಯ್ಯ
ಬೇರೆ ಕಟ್ಟುರಿಸೊ ಬೆಡಗೀನ....॥

ವಾಚಕರಟ್ಟೇಲಿ ಏನಮ್ಮ ಚೋಜೀಗ
ಚೋಜೀಯ ಮೇಲೆ ಗಳಬೀಸಿ । ಅಣ್ಣಯ್ಯ
ಅವನು ಸೂಳೀಗೆ ಕಳಿಸ್ಯವನೆ ಗರುಡೀಯ....॥

ಸೂಳೆಯೊಂದಿಗಾಡಿ ಸೋರುಗೋದ ಅಣ್ಣಯ್ಯ
ದೇಶ ತಿರುಗುವ ದಾಸಗಿತ್ತಿ । ರೊಂದಿಗಾಡಿ
ಗೋಸಂಬಿಯಾದ ದೊರೆಮಗ....॥

ಕಳಿಯಡಕೆ ಇದ್ದಂಗೆ ಕಡಿದಡಕೆ ಹೋದಂಗೆ
ಮಡದಿ ಇದ್ದೋನೆ ಮನೆ....ಮನೆ....।
ತಮ್ಮಯ್ಯ ನಿನಗ್ಯಾಕೊ....ಹಿಡಿಗುದುರೆ....ಹಿಡಿಗುದುರೆ
ಮಡದಿ ಇದ್ದಾರೆ ಮನೆ ಮನೆ....॥

ಕಳಿಯಡಕೆ ಬೇಕು ಕಂಬಿ ಜೋತುರಬೇಕು
ಗಂಡನುಳ್ಳೋಳ ಮನೆಬೇಕು । ತಂಗ್ಯಮ್ಮ
ನಾನುಂಡೋಗಿ ಅರಘಳಿಗೆ ಇರಬೇಕು....॥

ಹಾಸಿಗೆ ಹಾಸಿ ಯಾಕು ನಿಂತೆ ಎಲೆಹೆಣ್ಣೆ
ಆತ ಹೋಗ್ಯವನೆ ಸೊಬಗೀನ । ಸೂಳೇರಮನೆಗೆ
ನೀನು ತೆಗಿಯ ವಜ್ರಾದ ಅಗಣೇಯ....॥

ತೆಗೆ ನನ್ನ ಚಿನ್ನಾವೆ ತೆಗೆ ನನ್ನ ರನ್ನಾವೆ
ತೆಗೆ ನನ್ನ ಪದಕಾವೆ । (ಪದಕಾದ) ಪಟ್ಟಣದರಾಣಿ
ನೀನು ತೆಗೆಯೆ ವಜ್ರದ ಅಗಣೇಯ....॥

ಬೆಡಗಿನ ಬಾಲೆಗೆ ಸಾದನಿಟ್ಟವನ್ಯಾರೆ
ಗುಂಪು ನೋಡಿಟ್ಟೆ ಗುರಿಕಾರ । ನಮ್ಮನೆಯ
ಕೆಂಪು ನೋಡಿಟ್ಟೆ ದೊರೆಮಗಳ....॥

ಹಾದೀಯ ಹೊಲಬೇಡ ಬೀದೀಯ ಮನೆಬೇಡ
ಊರ ಗೌಡಾನ ನೆರೆಬೇಡ । ಅಣ್ಣಯ್ಯ
ಜೂಜುಕಟ್ಟೇಲಿ ನಿಲಬೇಡ....॥

ಜೂಜುಕಟ್ಟೇಲಿ ನಿಲುಬೇಡ....ಅಣ್ಣಯ್ಯ
ಜೂಜೀಗೆ ಬಿದ್ದಣ್ಣ ತರಬೇಡ । ಅಣ್ಣಯ್ಯ
ನೀನು ಜೂಜೀಗೆ ಬಿದ್ದಣ್ಣ ತರಬೇಡ....॥

ಹಾದೀಯ ಹೊಲಬೇಕು ಬೀದೀಯ ಮನೆಬೇಕು
ಊರು ಗೌಡಾನ ನೆರೆಬೇಕು । ತಂಗ್ಯವ್ಮ
ನಾನು ಜೂಜು ಕಟ್ಟೇಲಿ ನಿಲುಬೇಕು....॥

ನಾನು ಜೂಜುಕಟ್ಟೇಲಿ ನಿಲುಬೇಕು....ತಂಗ್ಯವ್ಮ
ನಾನು ಜೂಜೀಗೆ ಬಿದ್ದೆಣ್ಣ ತರಬೇಕು । ತಂಗ್ಯವ್ಮ
ನಾನು ಜೂಜೀಗೆ ಬಿದ್ದೆಣ್ಣ ತರಬೇಕು....॥



# ತಂಗ್ಯಮ್ಮನ ದುಃಖ

ಬಾಣಾತಿ ಬಳೆತೊಟ್ಟು ಸಾವಂತಿಗೆ ಹೂಮುಡಿದು
ಬಾಗಿಲಲ್ಲಿ ಯಾಕೆ ನಿಂತೆ ಬಾಣಾತಿ । ತಂಗ್ಯಮ್ಮ
ಬಾಗೂರ ಚಿನ್ನ ಹೊಳೆದ್ಹಂಗೆ....॥

ಎಳೆಬಾಣಾತಿ ತಂಗ್ಯಮ್ಮ ತಲೆ ಬಾಕಲಿಗೆ ಯಾಕೆ ನಿಂದೆ
ಎಳೆನಾಗಸ್ವಾಮಿ ತಲೆದೂಗ । (ತಲೆದೂಗಿ) ಏನಂದಾನೆ
ನನ್ನ ಎಳೆ ಚಿನ್ನವಿಷ್ಟು ಹೊಳಪಿಲ್ಲ....॥

ತಿಂಗಳು ಬಾಣಾತಿ ಅಂಗಡಿ ಬೀದೀಗೆ ಯಾಕು ಬಂದೆ
ಗಂಧಾದ ಶೆಟ್ಟಿ ಮುಖನೋಡಿ । ಏನಂದಾನೆ
ನನ್ನ ಕುಂದಾಣಿ ಇಷ್ಟು ಹೊಳಪಿಲ್ಲಾ....॥

ಸೋದರ ಮಾವಾನೆ ಏಳು ಸುತ್ತಿನ ಗೌಡಾನೆ
ಇಟ್ಟಕ್ಕಿ ಲೆಕ್ಕ ಬರೆಕೊಂಡ । ಮಾವಯ್ಯ
ಅವನು ಸ್ಯಾಲೆ ಉಡುಸಿ ಸೆರಗ ಹರಿಕೊಂಡಾ....॥

ಅಂತವಿಲ್ಲದ ಹೆಣ್ಣು ಜಂತವಿಲ್ಲದ ಸೀರೆ
ಸಂತೋಷಿಲ್ಲಾದ ಸತಿಪುರುಷ । (ಸತಿಪುರುಷಾರ)ಕೈಹಿಡಿದು
ಚಿಂತೇಲಿ ಮುಪ್ಪಾದ್ಲು ಬೆಲೆಹೆಣ್ಣು....॥

ಒಬ್ಬಣ್ಣ ಚಂದ ಕಬ್ಬಿನ ಗದ್ದೆ ಚಂದ
ಒಬ್ಬಣ್ಣ ಮಾಡೊ ಮುಯ್ಯಿ ಚಂದ । ಮೊಗ್ಗಿನರವಿಕೆ
ಬೊಗ್ಗಿದರೆ ಬೆನ್ನು ಬಿಗಿತಾವೆ....॥

# ನಾಳೆ ನನ್ನೂರಲ್ಲಿ ಇರಬೇಡ....

ಕಾಡುಮಲ್ಲಿಗೆ ಜೋಡೀಸಿ ಕುಯ್ಯೋನೆ
ಕೋಡೀಲಿ ಮುಖವ ತೊಳೆಯೋನೆ।(ತೊಳೆಯೊ)ತಮ್ಮಯ್ಯ
ಕೋಗಿಲೆ ಕಂಡು ನಗುತಾವೆ....॥

ಬೆಟ್ಟದ ಹೂವ ಎಟಕೀಸಿ ಕುಯ್ಯೋನೆ
ಬೆಟ್ಟಾದ ಶೆಟ್ಟಿ ನನ ತಮ್ಮ। ಕುಯ್ದ ಹೂವು
ಪಟ್ಟಣವೆಲ್ಲಾ ಘಮಗರಿದೊ....॥

ಪಟ್ಟಣದಲ್ಲಿ ಪಡಶಾಲೆ ಮೈಸೂರಿನಲ್ಲಿ ಕೈಶಾಲೆ
ಗಂಜಾಮ್ದಲ್ಲಿ ಬೆಳೆಯೊ ದುಂಡುಮಲ್ಲಿಗೆ। ಹೂವ
ನನ್ನ ಪುಂಡಗಾರ ತಮ್ಮಯ್ಯ ಕೊಂಡು ಮುಡಿಯೊ....॥

ಮೈಸೂರೆಣ್ಣೀಗೆ ಮಂಚ ಸುಪ್ಪೊತ್ತೀಗೆ
ಮಂಚಾದ ಕೆಳಗೆ ಎಳನೀರು। ನಿಂಬೆಹಣ್ಣು
ನನ್ನ ಮಂತ್ರಿ ತಮ್ಮಯ್ನ ಮಡದೀಗೆ....॥

ಈರುಳ್ಳಿ ಬೆಳ್ಳುಳ್ಳಿ ರಾಯಪುಡಿ ಸಕ್ಕಾರೆ
ಸಾಲು ಮೂಲಂಗಿ ಸಪ್ಪಸೀಗೆ। ಅಡಿಗೆಮಾಡಿ
ನನ್ನರಾಯ ತಮ್ಮಯ್ಗೆ ಹಗಲೂಟ....॥

ಹಗಲೂಟ ಹಾಲೂರು ಇಳ್ಳೂಟ ಬೇಲೂರು
ನನ್ನ ಮದ್ಯಾನದೂಟ ಮಧುಗಿರಿ। ಅಕ್ಕನಮನೇಲಿ
ನಾನು ನಿದ್ರೆ ಮಾಡೋದು ಮೈಸೂರು....॥

ಮೈಸೂರು ಮಲ್ಲಿಗೆ ಯಳಂದೂರು ಸಂಪಿಗೆ
ನನ್ನ ಚಿಕ್ಕರಿಸಿನಕೆರೆ ಚಿನ್ನಾವೆ। (ಬಿನ್ನಾದ) ತಾಳೆಹೂವು
ನನ್ನ ಚಿಕ್ಕಣ್ಣನಿಗೆಲ್ಲಿ ದೊರಕೀತು....॥

ಹಂಚೀನ ಅಟ್ಟೀಗೆ ಕಂಚೀನದಾರಂದ್ರ
ಅಂತೆ ನೋಡಿದರೆ ಅಪರಂಜಿ । ಅಪ್ಪಾನ ಮನೆ
ನಾನು ಬಿಟ್ಟು ಹೋಗಾಕೆ ಮನಸಿಲ್ಲಾ....॥

ಕಗ್ಗಲ್ಲ ಹೊಲಕೆ ಕರಿಸ್ಯಾಮೆಬಿತ್ತಿ
ಒಬ್ಬಳಿಗೆ ಒಂದೊಬ್ಬ ಸವಿವಲ್ಲೊ । ಅಣ್ಣಯ್ಯ
ಎಬ್ಬರಿಸೊ ನಿನ್ನ ಮಡದೀಯ....॥

ಮಡದೀಯ ಎಬ್ಬರಿಸಲಾರೆ ಅತಿ ನಿದ್ದೆ ಮಾಡಲಾರೆ
ಮೆಲ್ಲಗೊಂದೊಬ್ಬೆ ತೊಳಿಸಮ್ಮ । ತಂಗ್ಯಮ್ಮ
ನೀನು ಮೆಲ್ಲಗೊಂದೊಬ್ಬೆ ತೊಳಿಸಮ್ಮ....॥

ಮಡದೀಯ ಸುದ್ದಿ ನನ ಮುಂದೆ ಆಡಬೇಡ
ನಾಳೆ ನನ್ನೂರಲ್ಲಿ ಇರಬೇಡ । ತಂಗ್ಯಮ್ಮ
ನೀನು ನಾಳೆ ನನ್ನೂರಲ್ಲಿ ಇರಬೇಡ....॥

ಎತ್ತ ತರಿಸಯ್ಯ ಪಟ್ಟೀಯ ಬಿಗಿಸಯ್ಯ
ಹೊತ್ತಿನಂತೆ ನಮ್ಮ ಕಳುವಯ್ಯ । ಕಣ್ಣೀರು
ಮುತ್ತಿನ ಮಣಿಯಂಗೆ ಹರಿದಾವು....॥

ತೊಟ್ಟಿಲು ಹೊತ್ತುಕೊಂಡು ತೌರುಬಣ್ಣಾವುಟ್ಟುಕೊಂಡು
ನಮ್ಮಪ್ಪ ಕೊಟ್ಟೆಮ್ಮೆ ಹೊಡೆಕೊಂಡು । ತಂಗ್ಯಮ್ಮ
ಅವಳು ತಿಟ್ಟತ್ತಿ ತೌರು ನೆನೆದಾಳು....॥

ಬೆಟ್ಟಕ್ಕೆ ಬಿದುರಾಸೆ ಬಿದರೀಗೆ ಎಲೆಯಾಸೆ
ಗರುಡಾಳ ಸ್ವಾಮೀಗೆ ಗರಿಯಾಸೆ । ತಮ್ಮಯ್ಯ
ಹೆಣ್ಣು ಮಕ್ಕಳಿಗೆ ತೌರಾಸೆ....॥

ಅಣ್ಣನೆಂಡಾರು ಅವಳ್ಯಾರೀಗೆ ಅತ್ತೀಗೆ
ಸುಣ್ಣಾದ ನೀರು ವಲೆಮೇಲೆ । ಇಟ್ಟುಕೊಂಡು
ಅವಳು ಎಮ್ಮೆ ಹಾಲೆಂದು ಎರೆದಾಳು....॥

ಎಮ್ಮೆ ಮಸರೀಗೆ ಸಣ್ಣಮಂತಿನಕೋಲು
ಚಿನ್ನಾದವೆರಡು ಚಿಲಕಾಣೆ । ತಕ್ಕೊಂಡು
ಅವಳು ಬಿನ್ನಾಣೆ ಮೊಸರು ಕಡೆದವಳೆ....॥

ಆಚೆಕೇರಿ ಕುದುರೆ ಈಚೆಕೇರಿಗೆ ಬಂದೊ
ಕಾಲು ಪಂಡೇದ ಕಲಿಕುದುರೆ । ಶಬತಾಕೆ
ಅವಳು ತಂಗ್ಯಮ್ಮ ಬಾಕೀಲು ತಡೆದವಳೆ....॥

ಬಾಕೀಲು ತಡೆದ ತಮ್ಮನಿಗೆ ಬಣ್ಣಾವ ಹುಡಿಸೇನು
ಹಸೆಯ ತಡೆದಂತೆ ಹುಸಿಯೋಳೆ । (ಹುಸಿಯೊ) ತಂಗ್ಯವ್ಗೆ
ಅವಳ್ಗೆ ಹಸುವೀನ ಕಡಸ ಹೊಡೆತೀನಿ....॥

ಅರಿಷಾಣ ಬಿತ್ತಿ ಅರಸ ದಂಡಿಗ್ಹೋದಾ
ಅರಿಷಾಣವೆಲ್ಲಾ ಕುಯಿಲಾದೊ । ರಾಯಾರೆ
ನನ್ನ ಅರಸ ದಂಡೆದ್ದು ಬರಲಿಲ್ಲಾ....॥

ರಾಜಾಣ ಬಿತ್ತಿರಾಯ ದಂಡಿಗೆ ಹೋದ
ರಾಜಾಣವೆಲ್ಲಾ ಕುಯಿಲಾದೊ । ರಾಯಾರೆ
ನನ್ನರಾಯದಂಡೆದ್ದು ಬರಲಿಲ್ಲಾ....॥

ನೆನ್ನೆರಾತ್ರಿ ಕಂಡೆನಲ್ಲೆ ಚೆನ್ನದಂತ ಸ್ವಪ್ನಾವ
ಬೆಳ್ಳಿ ತಟ್ಟೇಲಿ ಬೆಣತಕ್ಕಿ । ತಕ್ಕೊಂಡು
ಅವನು ಮಂಚ ಸೆಯಿವಾಗಿ ಬರುತಾನೆ....॥



# ಚಿನ್ನದುಂಗುರವ ಗೆಲುಬೇಕು

ಅಕ್ಕಾನ ಕರೆಯೋಕೆ ಚಿಕ್ಕೋನು ತಮ್ಮಯ್ಯ ಬಂದ
ಕಂದಣ್ಣ ಗ್ವಾಲು ಎರೆಯುೂತ । ಏನಂದಾಳೆ
ದುಂಬು ಕಾಲು ತಮ್ಮ ಹೊರಗೀರೊ ॥

ದುಂಬುಗಾಲು ತಮ್ಮ ಹೊರಗೀರೊ ಅನ್ನೊಹೊತ್ಕೆ
ಕುಂದೀತು ಅವನ ಕಲಿಮುಖ ।
ಕುಂದೀತು ಅವನ ಕಲಿಮುಖ ॥

ಕುಂದೀದ ಮುಖಕೆ ಗಿಂಡೀಲಿ ಅಗ್ಗಾಣ ಕೊಟ್ಟು
ಸೋಸೀದ ಅಕ್ಕಿ ಸೋಸಿ । ಉಗ್ಗೆನ್ನೋದು
ಕೋಪುಗಾರ ತಮ್ಮಯ್ಯ ಉಣು ಬಾರೋ ನೀನು
ಕೋಪುಗಾರ ತಮ್ಮಯ್ಯ ಉಣುಬಾರೋ ॥

ಉಂಡೆ ಬಂದೆ ಊರಲ್ಲಿ ಮಿಂದು ಬಂದೆ ಗಂಗೇಲಿ
ನಾಮೆಲ್ಲಿ ಬಂದೆ ಅಂಗಾಡಿ ಬಳಿಯೆಲೆಯ । (ಬಳಿಯಲೆ) ನನ್ನಕ್ಕ
ನೀನಿದ್ದಾಗ ಸಾಕು ಸುಖೀಬಾಳು....॥

ತಾಳು ತಾಳೆಂದಾರೆ ತಾಳನಲ್ಲಾ ತಮ್ಮಯ್ಯ
ತಾಳಂಚಿಪುರದ ನೆರಳಲ್ಲಿ....।
ತಾಳೆಂಚಿಪುರದ ನೆರಳಲ್ಲಿ ನಿಂತಾನಲ್ಲೆ
ನಿನ್ನಿಂದೇಯ ಮಗಳ ಕಳಿಸ್ತೇನು....॥

ಹೆಬ್ಬೆಟ್ಟನ ಸುಣ್ಣ ಹೆಗಲ ಮೇಗಲಿ ಚಂಚಿ
ಹೆಬ್ಬಾಕೀಲು ಬಗ್ಗಿ ಬರವೋನು । (ಬರವೊ) ತಮ್ಮಯ್ನ
ಹೆಬ್ಬೂರ ಅಕ್ಕ ತಡೆದಾಳು....॥

ಕಿನ್ನೂಡಿ ಕಿರುಮನೇಲಿ ತಮ್ಮಯ್ಯ ಸೂಳೆಮನೇಲಿ
ಸುಣಕಾಯಿ ಚಂಚಿನಡುಮನೇಲಿ । ಇಟುಕೊಂಡು
ಸುಣ್ಣಾಕೆ ನೂರಾಳು ಕಳಿಸ್ತೇನು....॥

ಅಕ್ಕಾನ ಮನೆಮುಂದೆ ಗಾರೇಯ ಪಡಶಾಲೆ
ಎಷ್ಟೊತ್ತು ಕಂದಣ್ಣ ಸುಖನಿದ್ರೆ । ಮೈಸೂರ
ದೊರೆಗಳು ಅಂದಲವ ಕಳುವಾರೆ....॥

ಅಂದಲ ಬಂದಾರೆ ಇನ್ನೆಷ್ಟೆತ್ತಾಗಾಲಿ
ನನ್ನಕ್ಕಾನ ಮಗಳು ಅತಿರಂಬೆ । ಕೈಲಿರುವ
ಚಿನ್ನದುಂಗುರವ ಗೆಲುಬೇಕು ॥

ಸೂಳೆಗಾರ ಕಂದಣ್ಣ ಸೂಳೀಗೆ ಏನುಕೊಟ್ಟೆ
ನಾನು ಕೊಟ್ಟೆ ಕಾಣಕ್ಕ ಹಿಡಿಹೊನ್ನು । ಬಿಡಮುತ್ತ
ರಾಜಗಾರಕ್ನ ಮಗಳೀಗೆ....॥

ಬಿದನೂರ ಸೂಳೆ ಬೀಸಣಿಗೆ ಕಳುವಾಳೆ
ಚದುರ ಕಂದಣ್ಣ ಮನಗೂವೆ । (ಮನಗೂವ) ಮಂಚದಮೇಲೆ
ಅವಳು ಉದುರು ಮಲ್ಲಿಗೆಯ ಕಳುವಾಳು....॥

ಸಣ್ಣಂಗಿ ಮೇಲೆ ಚಿನ್ನದ ಗುಂಡಿಸರ
ಅಲ್ಲೀಗೆ ಕಂದಯ್ನ ಕರಿಸ್ಯಾರೆ । ಮೈಸೂರ
ಎಳ್ಳೀನ ರಾಸಿ ಅಳತೀಗೆ....॥

ರಾಸಿ ಅಳೆಯೂತ ಈಶ್ವರನ ಪೂಜೂತ
ಬಾಸಿಂಗ್ದ ಕೊಳೆಗ ಬಲಗೈಲಿ । ಇಡಿಕೊಂಡು
ರೇಕುಳ್ಳ ಮಡದೀಯ ನಗಿಸ್ಯಾನು....॥

ಕುಂತು ಕುಣಿಗಲು ಗೆದ್ದೆ ನಿಂತು ಮಾಗುಡಿ ಗೆದ್ದೆ
ನಾನು ಮರೆತ್ತೆಣ್ಣ ಗೆದ್ದೆ ಮದಗಾದ । ಏರೀಮೇಲೆ
ಸೆರೆಹೋಗಿ ತಂದ್ಯಲ್ಲೊ ಮಡದೀಯ....॥

ಸೆರೆಯೋಗಿ ತರಲಿಲ್ಲ ಸೆರಗೊಡ್ಡಿ ಬೇಡಲಿಲ್ಲಾ
ಅರಮನೆಯಿಂದ ಬರುತಿದ್ದೆ । ನನ್ನಕ್ಕ
ಧರ್ಮಾಕೆ ಧಾರೆ ಎರೆದಾರು....॥

ಎಲೆಯ ಹಾಕಲಿಲ್ಲ ತಲೆಯಕಟ್ಟಲಿಲ್ಲ
ನಗುವ್ಹೋರ ಕೊಡ ನಗಲಿಲ್ಲ । ಗೆಣೆಗಾರ
ನೀನು ಸೆರೆಯಾಗಿ ತಂದ್ಹೇನೊ ಮಡದೀಯಾ....||

ಕಾಚು ಹಾಕಿದ ಬಾಯಿ ಬಾಚಿ ಕಟ್ಟಿದ ಮಂಡೆ
ನೆಗೆನುಡಿ ಇಲ್ಲಾದ ಪುರುಷಾರ । ಕೂಡಿದರೆ
ಹಗಲೆ ಕತ್ತಾಲೆ ಕವಿದಾವೆ....||



# ತಲೆಬಾಗಲಿಲ್ಲ ನನತಮ್ಮ

ಜಂಬು ನೇರಲೆಹಣ್ಣು ತಿಂದರೆ ಕಡುರುಚಿ
ಕೊಂಬೆಜಾರಿದರೆ ದಸುಮಾನ । ತಮ್ಮಯ್ಯ
ರಂಬೇರಸಂಗಮಾಡಿದರೆ ತಲೆಯೆರವು ॥

ತಲೆಯ ಮೇಗಲಪಾಗು ಎಲೆಯು ಕಾವಳಿಗಂಗೆ
ತಲೆಬಾಗಲಿಲ್ಲ ನನ ತಮ್ಮ । ನಿಂತುಕೊಂಡು
ಎಲೆಯಿಲ್ಲವಕ್ಕ ಮನೆಯಲ್ಲಿ ॥

ತೊಳಸಿ ಅಕ್ಕಿಯನೆ ತೊಳಸಿದ ಬೊಗುತಿಯೋನೊ
ಗೆಜ್ಜೆಕಾಲೀನ ಮಗನಾಣೆ । ನನ್ನಕ್ಕ
ನಿನ್ನಾಣೆ ಮನೆಯಲಿ ಎಲೆಯಿಲ್ಲ ॥

ಇಳ್ಳೇವದ ಭೋಗಿ ಇಳ್ಳೆದ್ದು ಬರ್ತಾನೆ
ಹ್ಯಾಗೆ ಮಾಡಾಲಿ ಎಲೆಯಿಲ್ಲ । ಮನೆಯಲ್ಲಿ
ಆಗ್ರ ಕೊಂದಾಳ ಕಳುವೇನು ॥

ಆಗ್ರದೆಲೆ ಬಂದೊ ಆಗ್ರದಡಕೆ ಬಂದೊ
ಮೈಸೂರ ಸೀಮೆ ಹೊಸಸುಣ್ಣ । ಬಂದಾರೆ
ನನ್ನಿಳ್ಳೆವದ ಭೋಗಿ ಎಲೆ ಮೆಲ್ಲೊ ॥

ಧರ್ಮಾರ ಹಟ್ಟೇಲಿ ದನನೋದೊ ಕರುವೋದೊ
ಧರ್ಮಪಾಲಕ ನನ ತಮಯ್ಯ । ಹಟ್ಟೇಲಿ
ಹಸುಮಕ್ಕಳಾಡಿ ಕೆಸರೆದ್ದೊ ॥

# ನಿನ್ನಜೋಕೀಗೆ ನಾಯಿ ಬಗಿಳ್ಯಾವು

ನಾಕೂರ ಮೇಲೆ ಯಾಕು ಬಂದೆ ಅಣ್ಣಯ್ಯ
ನಾಕೂರರ ಕಣ್ಣು ನಿನ ಮೇಲೆ । ಹಿರಿಯಣ್ಣ
ನಿನ್ನ ಜೋಕೀಗೆ ನಾಯಿ ಬಗಿಳ್ಯಾವು । ಅಣ್ಣಯ್ಯ
ನೀನು ಜೋತ್ರ ಎಳಕೊಳ್ಳೊ ಜುಜತುಂಬ ॥

ತಲೆಯ ಮೇಗಾಲ ಪಾಗು ಎಲೆಯ ಕಾವಳಿಗೆಯಂಗೆ
ತಲೆಬಾಗಲಿಲ್ಲ ಹಿರಿಯಣ್ಣ । ಕೂತುಕೊಂಡು
ಎಲೆಯಿಲ್ಲಾ ತಂಗಿ ಮನೆಯಲ್ಲಿ ॥

ಇಳ್ಳೇವ್ದ ಭೋಗಿ ಅವನಿಳಿದ್ದು ಬಂದವ್ನೆ
ಏನು ಮಾಡಾಲಿ ಎಲೆಯಿಲ್ಲಾ । ಕಂದಯ್ಯ
ನೀನು ಅಗ್ರಾ ಕೊಂದಾಳು ಕಳುವವ್ವ ॥

ಆಗ್ರಾದ ಎಲೆ ಬಂದೊ ಆಗ್ರಾದ ಅಡಕೆ ಬಂದೊ
ತುಂಕೂರ ಸೀಮೆ ಕೆನೆಸುಣ್ಣ । ಬಂದಾವೆ
ನನ್ನ ಇಳ್ಳೇವ್ದ ಭೋಗಿ ಎಲೆಮೆಲ್ಲೊ ॥

ಕೆಂದ ಕುದುರೆಯ ಅಣ್ಣಯ್ಯ ಸೆಂಜೆಲ್ಲೇತಕೆ ಬಂದೊ
ಲಗ್ನ ಕಾಣವ್ವ ಮನೆಯಲ್ಲಿ । ನೀನಿಲ್ಲಾದೆ
ಮದಲಿಂಗಗಾಲೆ ಮನಸಿಲ್ಲಾ ॥

ಕರಿಯ ಕುದುರೆಯ ಅಣ್ಣಯ್ಯ ಕತ್ತಲ್ಲೇತಕೆ ಬಂದೊ
ಮದ್ವೆ ಕಾಣವ್ವ ಮನೆಯಲ್ಲಿ । ನೀನಿಲ್ಲಾದೆ
ಮದಲಿಂಗಗಾಲೆ ಮನಸಿಲ್ಲಾ ॥

ದಳ ೩

## ಪ್ರೇಮಪೂಜೆ

ನಾಗಾರ ಕಲ್ಲತ್ತಿ ಹೂವ ಕುಯ್ಯುವನ್ಯಾರೊ
ನಾಗೇಂದ್ರನಳಿಯ ಬಲಿಯೀಂದ್ರ । ಕುಯ್ದ ಹೂವು
ನಾಗಕನ್ನೆಯರ ತುರುಬೀಗೆ....॥



‘ಆಡೂತ ಬಂದವಳೆ ಅತಿರಂಬೆ.... ’

# ಬಿಡಿ ಹಾಡುಗಳು

ಮುಡಿದಾರೆ ಮುಡಿಬೇಕು ಮಡಿವಾಳ ಮುರುಗಾವ
ಪಚ್ಚೆ ತೆನೆಯ ಪರಿಮಳಿಲ್ಲಾದ ಕಣಗಾಲು । ಹೂ ಮುಡಿದು
ನಾನು ಬರಿಯ ಪಾಪಕೆ ಒಳಗಾದೆ....॥

ಹುಡುಗಿ ಕರೆಕೊಂಡು ಹುಡುಗ ಜಾತ್ರೆಗ್ಹೋದಾ
ಹುಡುಗಿ ಕೈಲೊಂದು ಬಳೆಯಿಲ್ಲಾ । ಬಂಗಾರಶೆಟ್ಟಿ
ಕೈನೋಡಿ ಬಳೆಯ ತೊಡು ಬಾರೋ....॥

ಹಗಲಾನೆ ಮುಖದೋಳೆ ಜಗಲಿ ತುರುಬಿನೋಳೆ
ಜಗಳಕ್ಹೋಯಿತೀನಿ ಕೈಬಿಡೆ । ಬಳ್ಳಾರಿ
ಜಗಳ ನಿನ್ನಿಂದ ಗೆಲುಬೇಕು....॥

ಅರುಕಾಲು ಅಂಗೀಲಿ ಹುರಿಕಡಲೆ ಕಟ್ಟಿಕೊಂಡು
ಹುಡುಕಾಡುತ್ತಿದ್ದ ಹುಡುಗೀರ । ಗೆಣೆಯ
ಹುಡುಕಾಡುತ್ತಿದ್ದ ಹುಡುಗೀರ....॥

ಚಿಕ್ಕುಡಿಗರ ಸಂಘ ಸಿಕ್ಕಿದರೆ ಬಹುಬಂಗ
ನೆರದುಡಿಗಿ ಸಂಘ ನೆಲವಂಗ । ಆಚಿಕೇರಿ
ಬುಡ್ಡುಡಿಗಿ ಸಂಘ ಬಿಡದಲ್ಲೊ....॥

ನಾಗಮಂಗಲದೆಣ್ಣೆ ಬೇಗ ರಾಗಿಮಾಡೆ
ಕೂರೀಗೆ ನಿಂತಾವೆ ಹೊಲದಲ್ಲಿ । ನಿನಗಂಡ
ಭೀಮನಿಂತವನೆ ಬಿಸಿಲಲ್ಲಿ....॥

ಹುರುಳೀಯ ಕೊಡುತೀನಿ ನಿಮ್ಮ ಕುಳ್ಳೀಯ ಬರಹೇಳಿ
ಹುರುಳಲ್ಲಾ ಕಾಣೋ ಉರಿದುಳ್ಳಿ । ಎಲೆಗೆಣೆಯಾ
ನಿಮ್ಮ ಕುಳ್ಳಿ ಬಂದವಳೆ ಬರಹೇಳೊ....॥

ಅಕ್ಕೀಯ ಕೊಡುತೀನಿ ನಿಮ್ಮಕ್ಕಾನ ಬರಹೇಳೆ
ಅಕ್ಕ್ಯಲ್ಲಾ ಕಾಣೆ ಅವಲಕ್ಕಿ । ಎಲೆ ಗೆಣಿತಿ
ನಿಮ್ಮಕ್ಕನೊಂದಿರುಳು ಬರಹೇಳೆ....॥

ಮಾಳಿಗೆ ಮನೆರ್ಮೇಲೆ ಎಳ್ಳುರಾಸಿ ತೂರೋಳೆ
ಗಾಳಿ ಬೀಸಿದರೆ ಬಳುಕೋಳೆ । (ಬಳುಕೊ) ಎಲೆನಾರಿ
ನಿಮ್ಮತ್ತಿಲ್ಲವೇನೆ ಅರಮನೇಲಿ....॥

ಅತ್ತೆ ಇದ್ದರೇನು ಅಕ್ಕರೆ ತಪ್ಪಿದರೇನು
ಕಪ್ಪಿದ್ದರೇನು ತಿರುಪಿಲ್ಲಾ । ಹಳ್ಳಾದ ನೀರು
ತಿಳಿಯಾದರೇನು ರುಚಿಯಿಲ್ಲಾ....॥

ಹೋರಿ ದಾವಾಣಿ ನೂರೆಂಟು ಗಾವುದ
ಎತ್ತಿಡಿಯೆ ನಾರಿ ಹಣತೇಯ । ಶ್ರೀರಾಮಾರ
ಹೋರಿ ಬಂದಾವೆ ದಾವಣೆಗೆ....॥

ನಾಗಾರ ಕಲ್ಲುತ್ತಿ ಹೂವ ಕುಯ್ಯುವನ್ಯಾರೊ
ನಾಗೇಂದ್ರನಳಿಯ ಬಲಿಯೀಂಧ್ರ । ಕುಯ್ದ ಹೂವು
ನಾಗ ಕನ್ನೆಯರ ತುರುಬೀಗೆ....॥

ಅತ್ತೆಮನೆ ಸೊಸೆ ವತ್ತಿಲ್ಲಿ ನೀರಿಗ್ಹೋಗಿ
ಕಟ್ಟೆ ಮೇಲೊಬ್ಬ ಬಣಜೀಗ । ಕೂತುಕೊಂಡು
ಲಕ್ಷ ಕೊಟ್ಟೇನು ತಿರುಗೆಂದ....।

ಲಕ್ಷ ಕೊಟ್ಟಾರೆ ಕೊಪ್ಪೀನ ಬೆಲೆಯಿಲ್ಲಾ
ಇಕ್ಕೇರಿ ಎಂಬ ದುರುಗಾವೆ । (ದುರುಗಾದ) ಪೇಟೆಯಲ್ಲಿ
ನಾನಿಟ್ಟ ಮೂಗೂತಿ ಬೆಲೆಯಿಲ್ಲಾ....॥

ಪುರುಷ ಒಳ್ಳೆಯವನೆಂದು ಸರಸವಾಡಲುಬೇಡ
ತೊಟ್ಟಿಲು ತಾಗಿ ಮಗನೆದ್ದ ಕೋಪಾಕೆ । ಅವನು
ಕಿತ್ತಿಟ್ಟಾನು ಕೀಲು ಕಡಗಾವ....॥

ಸಾಲಾಕೆ ಬಾರೇ ನನ್ನ ಸವರುಗಾಲಿನ ತಂಗ್ಯವ್ಮ
ಸಡ್ಡೇಯು ಹೆಸರು ಸರಸ್ವತಿ । ಅಣ್ಣಯ್ಯ
ನಿನ್ನ ಅರೆಕೋಲಿನ ಹೆಸರು ಗಿಣಿರಾಮು....||

ಅರೆಕೋಲಿನ ಹೆಸರನು ಯೊರು ಕೊಟ್ಟರಣ್ಣಯ್ಯ
ನಾರಾಯಣ ಕೊಟ್ಟ ಶಿವಕೊಟ್ಟ । ಹರಿಗೋಲು
ಕಣಿವೆ ಬಾಗಲಿಗೆ ಕದವಾದೊ....||

ಕಯ್ಯಲ್ಲಿ ಕಟ್ಟಾಣಿ ಮಯ್ಯಲ್ಲಿ ಪುಟ್ಟಾಣಿ
ನರಸೀಪುರದ ಹೆಣ್ಣು ತಟವಾಣಿ । ತಮ್ಮಯ್ಯ
ನೀನು ಬಿಟ್ಟು ಬಿಡವಳ ಬಸವೀಯು....||

ಚಿಂತಾಕನಿಕ್ಕೊಂಡು ಸಂತೆಗೋಗೊ ಹೆಣ್ಣೆ
ಚಿಂತಿಲ್ಲವೇನೆ ಮನದಲ್ಲಿ । ನಿನಗಂಡ
ದೇಶಕೊಬ್ಬಾಳ ಅವನು ತರುತಾನೆ....||

ಕಬ್ಬು ಕಡಿಯೇನು ಉಬ್ಬು ನೇರುಳ್ಳೋನು
ಕಬ್ಬಿಣದ ಗಾಣ ಹೊಡೆಯೋನು । (ಹೊಡೆಯೊ) ಅಣ್ಣಯ್ಯ
ನಿನ್ನ ಹುಬ್ಬು ತಿದ್ಯವಳೆ ಶ್ರೀದೇವಿ....||

ಬಡವಾರ ಮಗಳಲ್ಲೆ ನಡುವೊಂದು ಹಿಡಿಯಲ್ಲೆ
ನಡೆದಾರೆ ಬಾಳೆ ಸುಳಿಯಲ್ಲೆ । ತಂಗ್ಯವ್ಮ
ನೀನು ನುಡಿದರೆ ಕೋಗಿಲೆ ದನಿಯಲ್ಲೆ....||

ವಾಸುದೇವ ಬೀಸಿದಾರೆ ವಾಸಿ ಕಾಣೆ ನಮ್ಮೊಲಕೆ
ಬ್ಯಾಸಾರಿಕೆಯಿಲ್ಲಾ ಕಳೆಯಿಲ್ಲಾ । ಅಣ್ಣಯ್ಯ
ಸಂತೋಷ ಉಂಟು ಮನದಲ್ಲಿ....||

ಬಡಗಾಲ ಮಳೆ ಹೊದು ಬಾಗೀದೊ ಆರಂಬ
ತೆನೆಯೋಗಿ ತೆಂಕ ಹೊರಗೀದೊ । ಅಣ್ಣಯ್ಯ
ಮಿದೆಯೋಗಿ ಗಗನ ತಗಲೀದೊ....||

ಅರಗೂರು ಹುಲ್ಲೆ ಚಂದ ಬಿತ್ತಿದೋರ ಬೆನ್ನು ಚಂದ
ಬಿತ್ತಾಕೆ ಬಿಡುವಾರ ಊರೀಗೆ । ಅಣ್ಣಯ್ನ
ದಟ್ಟಿ ಸುತ್ತೀದ ನಡುಚಂದ....॥

ಬೀಜದೆಡೆಗೆ ಬಂದೊ ಬತ್ತ ಕೂರೀಗೆ ಬಂದೋ
ಜಾಣ ಮಾದಿಗರ ವೀಣೆ ಬಂದೊ । ಅಣ್ಣಯ್ಯ
ಜಾಣ ಮಾದಿಗರ ವೀಣೆ ಬಂದೊ....।

ನಡೆದಾರೆ ನಡೆಗಲ್ಲೆ ನಡುವೊಂದು ಹಿಡಿಯಲ್ಲೆ
ನಿನ್ನೆದೆ ತಾಮ್ರಾದ ತಗಡು ಮಾತಿನಲ್ಲೆ । ನಿನ ಗಂಡ
ಜಾಣ ಹೋಯಿತನಲ್ಲೆ ದಂಡೀಗೆ....॥

ಜಾಣ ಹೋಯಿತನಲ್ಲೆ ದಂಡೀಗೆ....
ನೂತುಣದ ಗೊಂಬೆ ನುಲುವೂತ । ಬಾಗಿದ ಜಾಣ
ಹೋಗಿ ಬಂದ ಮುಗಿಲು ಸೆರಗೀಗೆ....॥

ಮದ್ವೆ ಮಾಡೇವು ಮಾತು ಕೇಳೊ ತಮ್ಮಯ್ಯ
ಚಂದ್ರಗಿರಿಯಲ್ಲಿ ಮನೆ ನೋಡಿ । ಬಂದಿವಿನಿ
ಚಂದ್ರಾಮಗಿಂತ ಚಲುವೇಯ....॥

ಬೀದಿ ಮನೆಯೋಳೆ ಬೀಸಣಿಗೆ ನರಿಗೋಳೆ
ಜಾಜಿ ಹೂವಿನ ಜಡೆಯೋಳೆ । ತಂಗ್ಯಮ್ಮ
ನಿನ್ನ ಮಡಿಲಕ್ಕಿ ಚೆಲ್ಲಿ ಫಲವಾದೊ....॥

ಮಾವಾನ ಮನೆ ಮುಂದೆ ಶೃಂಗಾರದ ಕಲುಬಾವಿ
ನಾವು ವಾರಾರಗಿತ್ತೀರು ಜಲನಾಡಿ । ತಂಪಾನೀರು
ನಮ್ಮ ಚಿಕ್ಕೋರು ಮೈಪಾಗೆ ಕೈದಾರ....॥

# ಗೌಡನ ಮಗಳು

ಏರಿಯ ಕೆಳೆಗೊಬ್ಬಾಳೆ ಎಲೆ ಗೌಡನ ಮಗಳೆ
ಎಳೆ ಸುಳಿ ಕಬ್ಬು ಕಾಯೋಳೆ....।
ಎಳೆ ಸುಳಿ ಕಬ್ಬು ಕಾಯೋಳೆ....।

ದೂರದ ನಾಡಿಂದ ದುಗು ಬಿದ್ದು ನಾ ಬಂದೆ
ತೋರೆ ಕಬ್ಬಿನ ಸಾದಾವ....ಎಲೆಹೆಣ್ಣೇ
ನೀನು ತೋರೆ ಕಬ್ಬೀನ ಸಾದಾವ....।

ಹುಟ್ಟಲಿಲ್ಲಾ ಬೆಳೆಯಲಿಲ್ಲಾ
ಗಿಡ್ಡಿನ ಜೋಳ ಮೊಳದುದ್ದ ತೆನೆ ಹೊರಟವೊ....॥
ಮೊಳದುದ್ದ ತೆನೆ ಹೊರಟವೊ....।

ಮೇಲೆ ಬಂದೊ ಗಿಣಿಗಳು
ಬೆರಗಾಗಿ ನಿಂತಾವು....
ಅವು ಬೆರಗಾಗಿ ನಿಂತಾವು
ಹೋಗೊ ನಿನ್ನಾದಿಗುಂಟ....।

ಮುಂಡೇಯ ಕೂರಿನೋಳೆ ಗೌಡನ ಮಗಳೆ
ತಿದ್ದೀನ ಬೆವರಿನೋಳೆ....।
ನೀನು ತಿದ್ದೀನ ಬೆವರಿನೋಳೆ....।

ನಿನ್ನ ತೊಳುಗಳೆರಡು ನಿಲುವಾಗಿ ನಿಂದಾವೆ
ಹೋಗೆ ನಿನ್ನ್ಯಾವ ಹೆಣ್ಣೆ....।
ಹೋಗೆ ನಿನ್ನ್ಯಾವ ಹೆಣ್ಣೆ....।

ಉಪ್ಪಾದ ಗಡ್ಡದೋನೆ ತಿದ್ದೀದ ಬೆವರಿನೋನೆ
ಗೌಡನ ಮಗನೆ....। ತಿದ್ದೀದ ಬೆವರಿನೋನೆ
ನೀನು ತಿದ್ದೀದ ಬೆವರಿನೋನೆ....।

ಕಡೆಯ ಹೊಲದಲ್ಲಿ ಕಗ್ಗಾಲಿ ಕೊಂಟಾಗಿ
ಹೋಗೊ ನಿನ್ಯಾವ ಗಂಡು....ಗೌಡನ ಮಗನೆ
ಹೋಗೊ ನಿನ್ಯಾವ ಗಂಡು....।

ಕುದುರ್ಹೆಯ ಕೊಡಿಸುವನಲ್ಲೆ
ಗೌಡನ ಮಗಳೆ । ಕುದುರೇಯ ಕೊಡಿಸುವನಲ್ಲೆ

ಕುದುರ್ಹೆಯು ನಮಗುಂಟು
ಕುದುರೆ ಮರಿಯು ನಮಗುಂಟು । ಚನ್ನಂಗಿ ಚೆಲುವ
ಕುದುರೆ ಮರಿ ನಮಗುಂಟು....।

ಮುದ್ದು ಮಂಚಗಳೆರಡು ಮಿಗಿಲಾಗಿ ನಮಗುಂಟು
ಹೋಗೊ ನಿನ್ನಾದಿಗೊಂಡು ಗೌಡನಮಗನೆ
ಹೋಗೊ ನಿನ್ನಾದಿಗೊಂಡು....।

ಆನ್ಹೆಯ ಕೊಡಿಸುವನಲ್ಲೆ ಗೌಡನ ಮಗಳೆ
ಆನೆಮರಿ ಕೊಡಿಸುವನಲ್ಲೆ....ಗೌಡನ ಮಗಳೆ
ನಿನಗೆ ಆನೆಮರಿ ಕೊಡಿಸುವನಲ್ಲೆ....।

ಆನೇಯು ನಮಗುಂಟು ಆನ್ಹೆಯ ಮರಿ ನಮಗುಂಟು
ಚನ್ನಂಗಿ ಚೆಲುವ ಮುದ್ದು ಮಂಚಗಳೆರಡು
ಮಿಗಿಲಾಗಿ ನಮಗುಂಟು....।
ಹೋಗೊ ನಿಮ್ಮಾದಿಗೊಂಡು....ಗೌಡನ ಮಗನೆ
ಹೋಗೊ ನಿಮ್ಮಾದಿಗೊಂಡು....।

## ನಾರಿ ವೈಯಾರಿ ಬಾರೇ....।

ನಾರಿ ವೈಯಾರಿ ಬಾರೇ ಒಂದು ಘಳಿಗೆ—
ಒಂದರಘಳಿಗೆ ॥
ನೀನು ದಾರಿಬಿಟ್ಟು ಹೊರಗ್ಹೋನೆ ಹೋಗುತ್ತೀನಿ—
ನಾಳೆ ಬರುತ್ತೀನಿ ॥
ಸೀರೆ ತಂದಿವ್ನಿ ಬಾರೇ ಕುಂತುಕೊಂಡು—
ನಾನು ಕುಂತು ನೈಯ್ಸಿಕೊಂಡು ॥
ಅವಳುಟ್ಟುಕೊಂಡು ಹೋಗುತಾಳೆ ।
ಸಿಟ್ಟುಕೊಂಡು—ಮನವ ತಿರುವಿಕೊಂಡು ॥
ನಾರಿ ವೈಯಾರಿ ಬಾರೇ ಒಂದು ಘಳಿಗೆ—
ಒಂದರ ಘಳಿಗೆ ॥
ಕುಬುಸ ತಂದಿವ್ನಿ ಬಾರೇ—ಕುಂತು ವಲಸಿಕೊಂಡು—
ನಾನು ಕುಂತು ವಲಸಿಕೊಂಡು ॥
ಅವಳುಟ್ಟುಕೊಂಡು ಹೋಗುತಾಳೆ ॥
ಸಿಟ್ಟುಕೊಂಡು ರಟ್ಟೆ ತಿರುವಿಕೊಂಡು
ಅವಳು ರಟ್ಟೆ ತಿರುವಿಕೊಂಡು ॥
ಬಂಧೀ ತಂದಿವ್ನಿ ಬಾರೇ—ಕುಂತುಕೊಂಡು—
ನಾನು ಕುಂತು ಮಾಡ್ಸಿಕೊಂಡು ॥
ಅವಳಿಟ್ಟುಕೊಂಡು ಹೊಗುತಾಳೆ—
ಸಿಟ್ಟುಕೊಂಡು ಕಣ್ಣು ತಿರುವಿಕೊಂಡು ॥
ನಾರಿ ವೈಯಾರಿ ಬಾರೇ ಒಂದು ಘಳಿಗೆ—
ಒಂದರಘಳಿಗೆ ॥
ಮೂಗೂತಿ ತಂದಿವ್ನಿ ಬಾರೇ ಮಾಡ್ಸಿಕೊಂಡು—
ನಾನು ಕುಂತು ತೂಗ್ಸಿಕೊಂಡು ॥

ಅನ್ನಿಟ್ಟುಕೊಂಡು ಹೋಗುತಾಳೆ—
ಮೂಗೂತಿ ತಿರುವಿಕೊಂಡು ॥

ಸೀರೆ ತಂದಿನ್ನಿ ಬಾರೇ ಕೊಂಡುಕೊಂಡು
ನಾನು ಕುಂತು ನೈಯ್ಸಿಕೊಂಡು ॥

ಅವಳುಟ್ಟುಕೊಂಡು ಹೋಗುತಾಳೆ—
ಸಿಟ್ಟುಕೊಂಡು ನಡುವ ತಿರುವಿಕೊಂಡು ॥

ನಾರಿ ವೈಯಾರಿ ಬಾರೇ ಒಂದು ಘಳಿಗೆ—
ಒಂದರಘಳಿಗೆ ॥

ದಾರಿಬಿಟ್ಟು ಮರೆಯಾಗ್ಹೋಗುತ್ತೀನಿ
ನಾನು ನಾಳೆ ಬರುತ್ತೀನಿ ॥



# ಆಡೂತ ಬಂದವಳೆ ಅತಿರಂಬೆ !

ಕೊರಮರ ಗುಂಡೀಲಿ ಕುಡಿಯೋಕೆ ನೀರಿಲ್ಲಾ
ತುರುಬು ಜಾಲಾಡಿ ನೀರ ಮೊಗೆಯೋಳೆ....।

ತುರುಬು ಜಾಲಾಡಿ ನೀರ ಮೊಗೆಯೊ....ಬಾಲೆಯು ಕಂಡು
ತಣ ಮಣ ಗುಡುತ್ತಿದ್ದನು....।

ಕೋಲು—ಕೋಲಣ್ಣ—ಕೋಲೆ
ಸಿರಿಗಂಧಾದ ಕೋಲು—ಕೋಲಣ್ಣ—ಕೋಲೆ ।

ತಣ ಮಣ ಗುಡದ್ದೋಳೆ
ತಲೆಯೆರಡಾಗಲ್ದೋಳೆ
ಇರುವ ಪಟ್ಟಣದ ಹೆಸರ್ದೋಳೆ....ಎಲೆಬಾಲೆ
ನೀನು ಇರುವ ಪಟ್ಟಣದ ಹೆಸರ್ದೋಳೆ....।

ಇರುವಾದು ಈ ಪಟ್ಟಾಣ
ಮೇಲೆ ಸುತ್ತಿನ ಕೋಟೆ....।
ಕಿನ್ನೂಡಿ ಕೀಲ್ದೀನ ಸಣಮಂಚ....ನನ ಗೆಳೆಯ
ನಾನಿರುವಾದು ಕಿನ್ನೂಡಿ ಕೀಲ್ದೀನ ಸಣಮಂಚ....।

ಕೋಲು—ಕೋಲಣ್ಣ—ಕೋಲೆ
ಸಿರಿಗಂಧಾದ ಕೋಲು—ಕೋಲಣ್ಣ—ಕೋಲೆ....।

ಕಿನ್ನೂಡಿ ಕೀಲ್ದೀನ ಸಣ ಮಂಚದೊಳಗಿರುವ
ಕನ್ನಾವ ಕೊರೆದ್ದೀನು ನುಸಿಯೋಕೆ....ನನಬಾಲೆ
ನಾನು ಕನ್ನಾವ ಕೊರೆದ್ದೀನು ನುಸಿಯೋಕೆ....।

ಕನ್ನಾವ ಕೊರೆದ್ದೀನು ಕುನ್ನಾಯಿ ಬೊಗಳಲ್ದೋಳೆ
ನಮ್ಮ ಕಂಡವರು ನಗುವಾರು....ನನ ಗೆಣೆಯ
ನಮ್ಮ ಕಂಡವರು ನಗುವಾರು....।

ಕೋ೹ಲು—ಕೋ೹ಲಣ್ಣ—ಕೋ೹ಲೆ
ಸಿರಿಗಂಧಾದ ಕೋ೹ಲು—ಕೋ೹ಲಣ್ಣ—ಕೋ೹ಲೆ....।

ನಕ್ಕರೆ ನಗಲ್ಹೇಳಿ....
ಕುಸವಾಯ್ತುಕ್ಕಾದ ಬಿಳಿಯಾಲೆ....
ಕುಸವಾಯ್ತುಕ್ಕಾದ ಬಿಳಿಯಾಲೆ—ತಕ್ಕೊಂಡು
"ಆಡೂತ ಬಂದವಳೆ ಅತಿರಂಬೆ...."
ಆಡೂತ ಪಾಡೂತ ನೋ೹ಡೂತ
ಕಾಡಲ್ಲೆರಡು ಘಮುಚುಕ್ಕಿ....
ಕಾಡಲ್ಲೆರಡು ಘಮುಚುಕ್ಕಿ....ಕರ್ಕೊಂಡು
ಕೂಡಲು ಬಂದವಳೆ ಅತಿರಂಬೆ....।

ಕೋ೹ಲು—ಕೋ೹ಲಣ್ಣ—ಕೋ೹ಲೆ
ಸಿರಿಗಂಧಾದ—ಕೋ೹ಲು—ಕೋ೹ಲಣ್ಣ—ಕೋ೹ಲೆ



# ಎಲೆ ನಾರೀ ಬಾಯೆಲ್ಲಾ ಕೆಂಪಗ್ಯಾಕೆ !

ಹಿಟ್ಟುಮಾಡಿ ಸೊಪ್ಪುಮಾಡಿ ಎಲೆ ನಾರೀ
ಇಕ್ಕಾದೆ ಎಲ್ಲಿಗ್ಹೋದೆ....
ಎಲೆನಾರಿ ನೀನು ಇಕ್ಕಾದೆ ಎಲ್ಲಿಗ್ಹೋದೆ ||

ನನ್ನ ಪ್ರಾಣನಾದ ಪದ್ಮಪುರುಷ
ಕೆರೆಯೊಳಗೆ ಬಳ್ಳಸೊಪ್ಪು ಕುಯ್ಯುತಿದ್ದೆ....
ನಾನು ಕೆರೆಯೊಳಗೆ ಬಳ್ಳಸೊಪ್ಪು ಕುಯ್ಯುತಿದ್ದೆ ||

ನೀನು ಬಳ್ಳಸೊಪ್ಪು ಕುಯ್ಯುವಾಗ
ಎಲೆನಾರೀ ಬೆಳ್ಳಗಿದ್ದವನು ಯಾರೇ....
ಎಲೆನಾರೀ ಬೆಳ್ಳಗಿದ್ದವನು ಯಾರೇ ||

ನನ್ನ ಪ್ರಾಣನಾದ ಪದ್ಮಪುರುಷ
ಕೆರೆಯೊಳಗೆ ಕೊಕ್ಕರವು ಬೆಳ್ಳಗಿತ್ತು....
ಆ ಕೆರೆಯೊಳಗೆ ಕೊಕ್ಕರವು ಬಿಳ್ಳಗಿತ್ತು ||

ನಿನಗೆ ಹೊಡೆಯೊನಿಲ್ಲಾ ಬಡಿಯೊನಿಲ್ಲಾ
ಎಲೆನಾರಿ ನಿನಗೆ ಮೈಯಲ್ಲಾ ಗಾಯವ್ಹೇಕೆ....
ನಿನಗೆ ಎಲೆನಾರೀ ಮೈಯೆಲ್ಲಾ ಗಾಯವ್ಹೇಕೆ ||

ನನ್ನ ಪ್ರಾಣನಾದ ಪದ್ಮಪುರುಷ
ಸೀಗೆ ವನವನ್ನು ನಾ ನುಗ್ಗಾಡಿ ಬಂದೇನು....
ಸೀಗೆ ವನವನ್ನು ನಾ ನುಗ್ಗಾಡಿ ಬಂದೇನು ||

ನಿನಗೆ ಎಣ್ಣೆಯಿಲ್ಲಾ ಬೆಣ್ಣೆಯಿಲ್ಲಾ
ಎಲೆನಾರೀ ತಲೆಯೇಕೆ ನುಣ್ಣಗ್ಹೀದೆ....
ಎಲೆನಾರೀ ನಿನಗೆ ತಲೆಯೇಕೆ ನುಣ್ಣಗ್ಹೀದೆ....

ಎಲೆಯಿಲ್ಲಾ ಅಡಕೆಯಿಲ್ಲಾ
ಎಲೆನಾರಿ ! ಬಾಯೆಲ್ಲಾ ಕೆಂಪಗ್ಯಾಕೆ
ನಿನ್ನ ಬಾಯೆಲ್ಲಾ ಕೆಂಪಗ್ಯಾಕೆ....।

ನನ್ನ ಪ್ರಾಣನಾದ ಪದ್ಮಪುರುಷ
ತೊಂಡೆಯ ಹಣ್ಣೆರಡು ತಿಂದು ಬಂದೆ
ನಾನು ತೊಂಡೆಯ ಹಣ್ಣೆರಡು ತಿಂದು ಬಂದೆ....।



# ಬೇಲೂರ ಚೆನ್ನಯ್ನ ಹಾಡುಗಳು*

ಮಲೆನಾಡೆಣ್ಣೀಗೆ ಮೂಗೂಳ ಸೀಗೆಕಾಯಿ
ತಲೆ ಬಾಚಿದೆಣ್ಣೆ ಮಡಿಲಲ್ಲಿ । ಚೆನ್ನಯ್ಯ
ಮಲೆನಾಡೆಣ್ಣೀಗೆ ಮನಸೋತ....॥

ಹತ್ತೀಳು ಅಂಕಳದ ಗಚ್ಚಿನ ಗಾರೆಯೊಳಗೆ
ಅಪ್ಪ ಚೆನ್ನಯ್ಗೆ ಸುಖನಿದ್ರೆ । ಆಗುವಾಗ
ವತ್ತೀಗೆ ಬಂದಾರೆ ಬರಹೇಳೊ....॥

ವತ್ತೀಗೆ ಬಂದಾರೇನು ಮತ್ತೆ ಇದ್ದರೇನು
ಅತ್ತೀಯ ಮಗಳು ದೊರೆಗಿಡ್ಡಿ । ಮನೆಯಲ್ಲಿ
ನಾನು ಒಪ್ಪತ್ತು ಇದ್ದು ಬರುತ್ತೀನಿ....॥

ಆರ್ಧೀಳು ಅಂಕಳದ ಗಾರೆ ಮಾಳಿಗೆಯೊಳಗೆ
ಅಣ್ಣ ಚೆನ್ನಯ್ಗೆ ಸುಖನಿದ್ರೆ । ಆಗುವಾಗ
ವಾಲೆ ಬಂದಾರೆ ಬರಹೇಳೊ....॥

ವಾಲೆ ಬಂದಾರೇನು ಮಾಲೆ ಇದ್ದರೇನು
ಮಾವಾನ ಮಗಳು ದೊರೆಗಿಡ್ಡಿ । ಮನೆಯಲ್ಲಿ
ನಾನು ಒಂದಿರುಳು ಇದ್ದು ಬರುತ್ತೀನಿ....॥

ಬೇಲೂರ ಚೆನ್ನಯ್ಗೆ ಬೆಳ್ಳೀಯ ಸುಣಕಾಯಿ
ಚೀಲದಲ್ಲಡಕೆ ಚಿಗುರಲೆ ತಕ್ಕೊಂಡು । ಚೆನ್ನಯ್ಯ
ಹೋದಾನೆ ಗಿಡ್ಡಿ ಅರಮನೆಗೆ....॥

---

*ಈ ಹಾಡುಗಳನ್ನು ಮಲೆನಾಡಿನ ಮಿತ್ರರಾದ ಶ್ರೀ ಸ್ವಾಮಿಗೌಡರು ಈ ಸಂಕಲನದಲ್ಲಿ ಸೇರಿಸಲು ಅನುಮತಿಯಿತ್ತಿದ್ದಾರೆ. ಅವರಿಗೆ ತುಂಬ ವಂದನೆಗಳು.

ಮದುಗ ಮಾವನೂರು ಮರಳಲ್ಲಾಡೊ ಹೆಣ್ಣೆ
ನಡು ಬಗ್ಗಿ ಕುಯ್ಯೊ ಜವನಾವ। ಬೇಲೂರ
ಚಲುವ ಚೆನ್ನಯ್ನ ತುರುಬೀಗೆ....॥

ಬೇಲೂರು ಚೆನ್ನಯ್ಯ ಬೇಳೂವೆಕಾರಾನು
ಹಾಲನು ಮಾರೊ ಕೊರಮತಿ। ಗಿಡ್ಡೀಯ
ನೀಲಿಮುಂಗುರಕೆ ಮನಸಿಟ್ಟ....॥

ಹಾಲುಕಾಸೆ ಗಿಡ್ಡಿ ಅರಿವಾಣ ಬೆಳಗೆ ಗಿಡ್ಡಿ
ಬೇಗನ್ಹೇಳೆ ಗಿಡ್ಡಿ ತೇರಿಗೆ....ನೀನು
ಬೇಗನ್ಹೇಳೆ ಗಿಡ್ಡಿ ತೇರೀಗೆ....॥

ತೇರು ಶೃಂಗರವಾದೊ ದೇವರಲ್ಲಿಗೆ ಹೋದೊ
ಮಾರಾಯ ಸೊಳೆಮನಿಗೋದ। ಚೆನ್ನಯ್ಯ
ಕಬ್ಬಿಣದ ಕದವ ಮರಿಗೊಂಡ....॥

ಗಿಡ್ಡೀಯ ಗುಡಿಯಲ್ಲಿ ಗುಡ್ಡನ್ನದೇನೀರೊ
ಕಂಚಿನ ಕುದುರೆ ಕೈ ತಾಳೆ ಹೂಯಾತ। ಚೆನ್ನಯ್ಯ
ಹೋದಾರೆ ಗಿಡ್ಡಿ ಅರಮನೆಗೆ....॥

ಚೆನ್ನೆಯ್ನ ಹೆಂಡಾರು ರನ್ನಾದ ಸೂಳೇರು
ಚಿನ್ನಾದ ಸೀರೆ ಮುಸುಕಿಟ್ಟು। ನೋಡ್ಯಾರೆ
ಗಂಡಾಗೆ ಬರುವ ಪರುಷೇಯ....॥

ಸ್ವಾಮಿ ಚೆನ್ನಯ್ಯ ತೇರ್ಮ್ಯೇಲೆ ನಿಂತುಕೊಂಡು
ಮಾಯ್ಯಾಕತಿ ಗಿಡ್ಡಿ ಬರಲಿಲ್ಲಾ। ಅಂತೇಳಿ
ನೀವು ಮಾಲೆಕುಂಡೋಗಿ ಕರೆತನ್ನಿ....॥

ಮಾಲೆ ತಂದಾರೆ ನಾನೇಕೆ ಬಂದೇನು
ತಾಳ ತಂಬೂರಿ ಹರಿಮೋರಿ। ನೀವುತಂದಾರೆ
ನಾನು ತೇರಿನೊತ್ತೀಗೆ ಎರಿಗೇನು....॥

ಅಪ್ಪ ಚೆನ್ನಯ್ಯ ತೇರಿನಮೇಲೆ ನಿಂತುಕೊಂಡು
ಮಾಯ್ಗಾತಿ ಗಿಡ್ಡಿ ಬರಲಿಲ್ಲಾ । ಅಂತೇಳಿ
ನೀವು ತೇರು ಕುಂಡೋಗಿ ಕರೆತನ್ನಿ....॥

ತೇರು ತಂದಾರೆ ನಾನೇಕೆ ಬರುವಾಲಿ
ಸ್ವಾಮಿಯ ಕೊರಳ ಪದುಕಾವ । ನೀವು ತಂದಾರೆ
ನಾನು ತಾನದೊತ್ತೀಗೆ ಎರಿಗ್ತೇನು....॥

ಮೂಡಾಲು ಸೀಮಿಂದ ಮುತ್ತೀನ ಸರ ಬಂದೊ
ಬೇಲೂರ ಚೆನ್ನಯ್ಯ ನೋಡಿ । ಆ ಮುತ್ತು
ಬೇಡ್ಯಾನೆ ಗಿಡ್ಡಿಕೊರಳೀಗೆ....॥

ತೊಳಚಿ ಅಟ್ಟಡಿಗೇಯ ಒಪ್ಪನಲ್ಲಾ ಚೆನ್ನಯ್ಯ
ಮೆಚ್ಚಿ ಬಂದೋಳು ಕಿರಿಯೋಳು । ಅಟ್ಟಡಿಗೆ
ಬೇಲೂರ ಚೆನ್ನಯ್ಗೆ ತಳಿಗಾದೊ....॥

ಸಾವೀರ ಕಲ್ಲಿನಕೋಡಿ ಸಂಪೀಗೆ ಕಲುಕಟ್ಟಿ
ಸೂಳೇರು ಕಟ್ಟಸಿದ ಗಜಗೊಂಡ । ಉಪ್ಪರಿಗೆ
ಬೇಲೂರ ಚೆನ್ನಯ್ಗೆ ಮನಸಾದೆ....॥



## ಸರಸವೆಂಬೋದು ಹರುಷಾವೆ....

ಅಕ್ಕಯ್ನ ಮಗಳು ಚಿಕ್ಕೋಳು ಎನ್ತಿದ್ದೆ
ನೀ ಚಿತ್ತಾರಿ ಕಾಣೆ ಬಿಲಪತ್ರೆ। ಮರದಡಿಯ
ನಿಲ್ಲಿಸುತಾನೆ ನೀಲ ಕುದುರೇಯಾ ||

ನಿಲ್ಲಿಸುತಾನೆ ನೀಲ ಕುದುರೇಯ ತಮ್ಮಯ್ಯ
ಅಕ್ಕಯ್ನ ಮಗಳು ಚಿತ್ತಾರಿ ಕಾಣೆ ಬಿಲಪತ್ರೆ। ಮರದಡಿಯ
ಅವಳು ಮುತ್ತೀನ ಚೆಂಡ ದಾವಿಸ್ಯಾಳೆ ||

ಮಾತು ಮಾತೀಗೆ ಮುಂಚಾವ ಹೊರಿಗ್ಯಾಳೆ
ಮಾತು ಮಾತೀಗೆ ಮುಂಚಾವ ಹೊರಿಗ್ಯಾಳೆಅಕ್ಕಯ್ನ ಮಗಳು
ಅವನೆತ್ತರದಿ ಬೆಳೆವ ಕಿತ್ತಾಲೆಯ ಕಂಡು ತಮ್ಮಯ್ಯ
ಹಿತ್ತಿಲಲ್ಲಿ ತಾನು ನಗುತಾನೆ ||

ಗಂಧದುಂಡೆ ಎಲ್ಲಿಟ್ಟೆ ಗಾಜೀನ ಭರಣಿ ಎಲ್ಲಿಟ್ಟೆ
ಹಿತ್ತಿಲಲ್ಲಿ ಬೆಳೆವ ಕಿತ್ತಾಲೆಯ। ದಾಳಿಂಬೇಯ
ಅವನಿಟ್ಟೆ ಕಾಣಕ್ಕ ನಾನು ಸರಸಾಕೆ ||

ಸರಸವೆಂಬೋದು ಹರುಷಾವೆ ತಮ್ಮಯ್ಯ
ತೊಟ್ಲಾಲುತಾಗಿ ಮಗನೆದ್ದ । ಕೋಪಾಕೆ
ಅವಳು ತೆಗೆದಿಟ್ಟಾಳು ಹಾಲು ಕುಡಿಕ್ಹೇಯಾ ||



## ಕೋಲು ಮಲ್ಲಿಗೆ ಕೋಲೆ

ಹಳ್ಳದೊಳಗಲ ಮಲ್ಲಿಗೆ
ನೀನು ಅರಳದೀರು ಮಲ್ಲಿಗೆ
ನೀನು ಅರಳಿದರೆ ಶಿವನ ಪಾದಸೇರು ಮಲ್ಲಿಗೆ ।



‘ಕೋಲೆ ರನದಿ ಕೋಲೆ ಚಿನದಿ ಕೋಲೆ ಕೋಲೆನಾ’

# ಮುನಿಯಪ್ನ ಹಾಡು

ಕೋಲು—ಕೋಲಣ್ಣ ಕೋಲೆ ರನ್ನದ—ಕೋಲೆ
ಕೋಲು—ಕೋಲಣ್ಣ ಕೋಲೆ ಚಿನ್ನದ—ಕೋಲೆ....||

ಒಳ್ಳೊಳ್ಳೆ ಮುಂದಿ ಬಿಳ್ಳಿ ಕಟ್ಟನ ಮುಂದಿ
ಎಲ್ಲೊ ಮುನಿಯಪ್ಪ ನಿನ ಮುಂದಿ....|

ಹಟ್ಟಿಗುಡಿಕಾಣೊ ಪಟ್ಟಣದ ದೊರೆ ಕಾಣೊ
ಬೊಟ್ಟು ಮುತ್ತು ಕಾಣೋ ಮುನಿಯಪ್ಪ....|
ಪಟ್ಟಣಕಿನ್ನೇನು ಬಯವಿಲ್ಲಾ ಕೋಲು ಕೋಲಣ್ಣ—ಕೋಲೆ....||

ಬೀದೀಯ ದೊರೆಕಾಣೋ ಜೋಡು ಮುತ್ತು ಕಾಣೋ
ಮುನಿಯಪ್ಪ ಕೇರಿಗಿನ್ನೇನು ಬಯವಿಲ್ಲಾ....ಕೋಲು
—ಕೋಲಣ್ಣ—ಕೋಲೆ

ಹಂಚಿ ಕಡ್ಡಡಿ ಹೊಂಚಾಡೂನಿವನ್ಯಾರೊ
ಕಂಚೀನ ಗುರಾಣಿ ಕೈಯ್ಯಲ್ಲಿಡಿದು....ಮುನಿಯಪ್ಪ
ಹೊಂಚಾಡಿ ಹುಲಿಯ ಹೊಡೆದಾನು ಕೋಲು-ಕೋಲಣ್ಣ-ಕೋಲೆ

ಎದ್ದಾನು ಮುನಿಯಪ್ಪ ಎಳೆಮೀಸೆ ತಿರುವೂತ
ಗಗ್ಗುರದ ಈಟಿ ತಿರುವೂತ ಮುನಿಯಪ್ಪ

ಕೋಲು—ಕೋಲಣ್ಣ ಕೋಲೆ ರನ್ನದ—ಕೋಲೆ
ಕೋಲು—ಕೋಲಣ್ಣ ಕೋಲೆ ಚಿನ್ನದ—ಕೋಲೆ....||

# ಕೋಲು ಆಟವು ಚೆಂದ....

ಕೋಲು ಆಟವು ಚೆಂದ
ಕಾಳೇಯ ದನಿ ಚೆಂದ
ಸೂಳೆಯ ಕುಣಿತ ಬಲು ಚೆಂದ
ಚಿನ್ನಾದ ಕೋಲು—ಕೋಲನ್ನ—ಕೋಲೆ
ರನ್ನಾದ ಕೋಲು—ಕೋಲನ್ನ—ಕೋಲೆ

ಹಾಲು ಬೋನವು ಚೆಂದ
ಮೇಲೆ ಮಾಳಿಗೆ ಚೆಂದ
ಹೋಳೀಗೆ ತುಪ್ಪಾದ ಸವಿಚೆಂದ
ರನ್ನಾದ—ಕೋಲು—ಕೊಲನ್ನ—ಕೋಲೆ
ಚಿನ್ನಾದ—ಕೋಲು—ಕೊಲನ್ನ—ಕೋಲೆ

ಮನೆಗೆ ಮಕ್ಕಳು ಚೆಂದ
ಬನಕೆ ವೃಕ್ಷವು ಚೆಂದ
ಮನೆಗೊಬ್ಬ ಅಜ್ಜಿ ಇರೆ ಚೆಂದ
ಗಂದಾದ ಕೋಲು—ಕೋಲನ್ನ—ಕೋಲೆ
ರನ್ನಾದ ಕೋಲು—ಕೋಲನ್ನ—ಕೋಲೆ

ಹಳಸೀನ ತೊಳೆ ಚೆಂದ
ಗಳಿಸೀದ ಹಣ ಚೆಂದ
ಒಲಿಯಾದ ಹೆಣ್ಣು ಬಿಡಚೆಂದ
ಮುತ್ತೀನ ಕೋಲು—ಕೋಲನ್ನ—ಕೋಲೆ
ರನ್ನಾದ ಕೋಲು—ಕೋಲನ್ನ—ಕೋಲೆ

ತಾಲಿ ಕೊರಳೀಗೆ ಚೆಂದ
ಕಳೆಯುಳ್ಳ ಮುಖಚೆಂದ

ಜೋಳಾದ ಮುದ್ದೆ ಬಲು ಚೆಂದ
ಗೆಜ್ಜೇಯ ಕೋಲು--ಕೋಲನ್ನ—ಕೋಲೆ
ರನ್ನಾದ ಕೋಲು—ಕೋಲನ್ನ—ಕೋಲೆ

ಬಾಳೇಯ ಗೊನೆ ಚೆಂದ
ಸೂಳೇಯ ನುಡಿ ಚೆಂದ
ಮನೆಗೆ ಗೋಳಾಡದಿರುವ ಸೊಸೆ ಚೆಂದ
ಹವಳಾದ ಕೋಲು—ಕೋಲನ್ನ—ಕೋಲೆ
ರನ್ನಾದ ಕೋಲು—ಕೋಲನ್ನ—ಕೋಲೆ

ಜೇನು ತುಪ್ಪವು ಚೆಂದ
ದಿನಪ ಗಗನಕೆ ಚೆಂದ
ಘನ ಮಹಿಮ ತಾಶಿವ ಚೆಂದ
ಲೋಕಾಕೆ ಕೋಲು—ಕೋಲನ್ನ—ಕೋಲೆ
ರನ್ನಾದ ಕೋಲು—ಕೋಲನ್ನ—ಕೋಲೆ

ಕತ್ತೇಯ ಮರಿ ಚೆಂದ
ತುತ್ತೇನ ನುಡಿ ಚೆಂದ
ಮುತ್ತುಗದ ಹೂವೆ ಬಲುಚೆಂದ
ಅಣ್ಣಯ್ಯ ನೀ ಚೆಂದ ನಮ್ಮ ಮನೆಗೆಲ್ಲಾ
ಕೋಲು—ಕೊಲೆನ್ನ—ಕೋಲೆ
ಹವಳಾದ ಕೋಲು—ಕೋಲನ್ನ—ಕೋಲೆ

ವಿದ್ಯ ಬುದ್ಧಿಗೆ ಚೆಂದ
ಬುದ್ಧಿ ವಿದ್ಯೆಗೆ ಚೆಂದ
ಹದ್ದು ಮೀರದೆ ನಡೆವ ಮಗ ಚೆಂದ
ಹವಳಾದ ಕೋಲು—ಕೋಲನ್ನ—ಕೋಲೆ
ಬಿದುರೀನ ಬೆಳ್ಳೀಯ ಕೋಲು—ಕೋಲನ್ನ—ಕೋಲೆ

ಬುರುಗದ ಹೂ ಚೆಂದ
ಹುಲ್ಲೇಯ ಮರಿಚೆಂದ
ಎಳಗಿನಲಿ ಎಮ್ಮೆಕರು ಚೆಂದ
ಮುಂದಲೂರ ಎಳೆಬಾಳೆ ಹುಡುಗಿ
ನಗೆ ಚೆಂದ—ಕೋೀಲು—ಕೋೀಲನ್ನ—ಕೋೀಲೆ
ರನ್ನಾದ ಕೋೀಲು—ಕೋೀಲನ್ನ—ಕೋೀಲೆ



## ಉದುರು ಉದುರು ಮಲ್ಲಿಗೆ

ಉದುರು ಉದುರು ಮಲ್ಲಿಗೆ
ಚದುರು ನಮ್ಮ ಕೇರಿಗೆ....।
ನೀನು ಚದುರಿದರೆ ಶಿವನ ಪಾದಸೇರು ಮಲ್ಲಿಗೆ ।

ಅಹ ! ತೋಟದೊಳಗಲ ಮಲ್ಲಿಗೆ
ನೀನು ದಾಟದೀರು ಮಲ್ಲಿಗೆ
ನೀನು ದಾಟದರೆ ಶಿವನ ಪಾದಸೇರು ಮಲ್ಲಿಗೆ....॥

ಅಹ! ಹಳ್ಳದೊಳಗಲ ಮಲ್ಲಿಗೆ
ನೀನು ಅರಳದೀರು ಮಲ್ಲಿಗೆ
ನೀನು ಅರಳಿದರೆ ಶಿವನ ಪಾದ ಸೇರು ಮಲ್ಲಿಗೆ....॥

ಅಹ! ದಿಬ್ಬದೊಳಗಲ ಮಲ್ಲಿಗೆ
ನೀನು ಹಬ್ಬದೀರು ಮಲ್ಲಿಗೆ
ನೀನು ಹಬ್ಬಿದರೆ ಶಿವನ ಪಾದಸೇರು ಮಲ್ಲಿಗೆ....

ಉದುರು ಉದುರು ಮಲ್ಲಿಗೆ
ಚದುರು ನಮ್ಮ ಕೇರಿಗೆ
ನೀನು ಚದುರಿದರೆ ಶಿವನ ಪಾದಸೇರು ಮಲ್ಲಿಗೆ....॥

ಅಹ! ಬೆಟ್ಟದ ಮೇಲಿನ ಮಲ್ಲಿಗೆ
ನೀ ಬೆಳೆಯದೀರು ಮಲ್ಲಿಗೆ
ನೀನು ಬೆಳೆದರೆ ಶಿವನ ಪಾದಸೇರು ಮಲ್ಲಿಗೆ....॥

ಅಹ! ಬಾಗಲೊಳೆಗಲ ಮಲ್ಲಿಗೆ
ನೀನು ಬಳುಕದೀರು ಮಲ್ಲಿಗೆ
ನೀನು ಬಳುಕಿದರೆ ಶಿವನ ಪಾದಸೇರು ಮಲ್ಲಿಗೆ....॥

ಬೆಳ್ಳಿಯಂಥ ಮಲ್ಲಿಗೆ
ನೀನು ಬೆಳಯದಿರು ಮಲ್ಲಿಗೆ
ನೀನು ಬೆಳದರೆ ಶಿವನ ಪಾದಸೇರು ಮಲ್ಲಿಗೆ

ಉದುರು ಉದುರು ಮಲ್ಲಿಗೆ
ಚದುರು ನಮ್ಮ ಕೇರಿಗೆ
ನೀನು ಚದುರಿದರೆ ಶಿವನ ಪಾದಸೇರು ಮಲ್ಲಿಗೆ....||

ಮರದ ಮೇಲಿನ ಮಲ್ಲಿಗೆ
ನೀನು ಮರೆಯದಿರು ಮಲ್ಲಿಗೆ
ನೀನು ಮರೆತರೆ ಶಿವನ ಪಾದಸೇರು ಮಲ್ಲಿಗೆ....||

ಕಾಡಿನೊಳಗಿನ ಮಲ್ಲಿಗೆ
ನೀನು ಕೆದರದಿರು ಮಲ್ಲಿಗೆ
ನೀನು ಕೆದರಿದರೆ ಶಿವನ ಪಾದಸೇರು ಮಲ್ಲಿಗೆ....||

ಹಾರದೊಳಗಿನ ಮಲ್ಲಿಗೆ
ನೀನು ಹರಿಯದಿರು ಮಲ್ಲಿಗೆ
ನೀನು ಹರಿದರೆ ಶಿವನ ಪಾದಸೇರು ಮಲ್ಲಿಗೆ....||

ಉದುರು ಉದುರು ಮಲ್ಲಿಗೆ
ಚದುರು ನಮ್ಮಕೇರಿಗೆ
ನೀನು ಚದುರಿದರೆ ಶಿವನ ಪಾದಸೇರು ಮಲ್ಲಿಗೆ....||

# ಜಂಜಪ್ಪ ನೆನೆದು....

"ಕೋಲೆ ರನದಿ ಕೋಲೆ ಚಿನದಿ ಕೋಲೆ ಕೋಲೆನಾ" ||
ಕೋಲೆ ಮೇಲೆ ಮಮುನ ಚಂದ್ರ ಮೇಲು ಕೋಲೆನಾ ||
ಒಕ್ಕಳಗಂಟ ಹುಲಿಯ ಚರ್ಮ ಕುಕ್ಷಿಗಾರನೋ....
ಧೀರಕುಕ್ಷಿಗಾರನೋ.... ಇಂತಹ ನೆಚ್ಚದೀರ....
ಹಲ್ಲು ಮುರಿವ ಪಟ್ಟದಟ್ಟನೋ....|

ಪಟ್ಟದಟ್ಟ ಮುತ್ತೀನ ಬಿಲ್ಲೊಂದಪ್ಪ ಧರಿಸಿದ
ಜಂಜಪ್ಪ ಧರಿಸಿದ........|
ಇಂತಹ ಗೆಜ್ಜೆ ಕಡಗ ನೀಲಿ ಸಾಮ ವೈಗೆ ಧರಿಸಿದ........
ಜುಂಜಪ್ಪ ಧರಿಸಿದ........
ಕೋಲೆ ರನದಿ ಕೋಲೆ ಚಿನದಿ ಕೋಲೆ ಕೋಲೆನಾ||
ಕೋಲೆ ಮೇಲೆ ಮಮುನ ಚಂದ್ರ ಮೇಲು ಕೋಲೆನಾ||

ಹಾವಿನಲ್ಲಿ ಈರಯ್ಯ ಚುಂಚಥಾಯನಾಡೀದ
ಸ್ವಾಮಿ ಪಗಡೆನಾಡೀದ........|
ಎಂತಹ ತಾಯಿನುಕ್ಕಳೆಂಬ ಸುದ್ದಿ ತೋರಿ ಮೆರೆಸಿದ........
ಉತ್ತದಲ್ಲೀರಯ್ಯ ಚುಂಚಲೆತ್ತಿನಾಡಿದ |
ದೇವ ಪಗಡೆನಾಡಿದ ||

ಇಂತಹ ಅಪ್ಪ ಮಕ್ಕಳೆಂಬ ಸುದ್ದಿ ಎತ್ತಿ ಮೆರೆಸಿದ
ಸುದ್ದಿ ಎತ್ತಿ ಮೆರೆಸಿದ....|
ಮೈಸೂರ ಮಹಾರಾಜ ಭೂಪ ಅಂದಾನೆ ತರಿಸಿದ
ಧೀರೊಂದಾನೆ ತರಿಸಿದ....|
ಅಂತಹ ಆನೆಮೇಲೆ ಚಂದ್ರಗಾವಿ ಡಾಲ ನೆಡಸಿದ |
ಆನೆಮೇಲೆ ಚಂದ್ರಗಾವಿಡಾಲ ನೆಡಸಿದ |
ಧೀರ ಡಂಮುಕ ನೆಡಸಿದ....||

ಕಂಚಿನ ಬೈರಿ ನುಡಿಸಿದ ।
ಇಂತಹ ಸಂದಿನೂರ ಗೊಂದಿನೊಳಗೆ ದಂಡನೆಡಸಿದ
ಧೀರ ದಂಡ ನೆಡಸಿದ....।
ಕೋೀಲೆ ರನದಿ ಕೋೀಲೆ ಚಿನದಿ ಕೋೀಲೆ ಕೋೀಲೆಸಾ ॥
ಕೋೀಲು ವೋೀಲೆ ಮಮನ ಚಂದ್ರ ಮೋೀಲು ಕೋೀಲೆಸಾ ॥



# ಜುಂಜಪ್ನ ಹಾಡು

ಮೊದಲು ನೆನೆದೇನು ಮದಗಿರಿ ಪರ್ವತದ
ನವಿಲೆ ಸಾರಂಗದ ಗುರುಗಂಜಿ । ಗುಡ್ಡದ ಮೇಲೆ
ಕರುವ ಕಾಣೀರ ಎಳೆಗಾವ....॥

ಕರುವ ನಾವೇನ ಬಲ್ಲೊ ಕಾಯೊ ಗೊಲ್ಲಾನ ಕೇಳಿ
ಸಾವಿರ ತಳುಕೀನ ಮದದ್ಹೋರಿಯ । ಮೇಲೆ
ತಾಯಿ ಮಕ್ಕಳೆರಡು ಮನಿಗ್ಯಾವು....॥

ದನವ ಕಾಯೊನ್ಯಾರೊ ದಾರಾಳ ಕೊರಳೋನೆ
ದನವೆಲ್ಲಿ ಕುಡಿದೊ ತಿಳಿನೀರ । ಜುಂಜಪ್ಪ
ಭೂವ ಚಕ್ರಾದ ಹೊಳೆಯಲ್ಲಿ । ಜುಂಜಪ್ಪ
ಅಲ್ಲಿ ಕುಡಿದಲ್ಲಿ ತಳಿಗ್ಯಾವು....॥

ಹೋರಿ ಕಾಯೊನ್ಯಾರೊ ದಾರಾಳ ಕೊರಳೋನೆ
ಹೋರಿ ಜೇನಿಗರ ಹೊಲಕೋದೊ । ಜುಂಜಪ್ಪ
ದಾರಾಳ ಕೊಳಲು ದ್ವನಿಮಾಡೊ....॥

ಎತ್ತು ಕಾಯೋನ್ಯಾರೊ ಮುತ್ತೀನ ಕೊರಳೋನೆ
ಎತ್ತು ಜೇನಿಗರ ಹೊಲಕೋದೊ । ಜುಂಜಪ್ಪ
ಮುತ್ತೀನ ಕೊಳಲು ದ್ವನಿಮಾಡೊ....॥

ಒಂಟೆ ಹೊಟ್ಟೆಲ್ಲಿ ಕುಂಟಾರುಟ್ಟೆದಂಗೆ
ನೀನೇನುಟ್ಟೇದೊ ಮೈಲಾರಿ । ಜುಂಜಪ್ಪ
ನಾನಿದ್ದರ್ಹೋರಿ ಬಿಡನ್ಹೇನೊ....॥

ಆನೆ ಹೊಟ್ಟೆಲ್ಲಿ ಸೂಲಿಗುಟ್ಟೆದಂಗೆ
ನೀನೇನುಟ್ಟೇದೊ ಮೈಲಾರಿ । ಜುಂಜಪ್ಪ
ನಾನಿದ್ದರ್ಹೋರಿ ಬಿಡನ್ಹೇನೊ....॥

# ಜುಂಜಪ್ನ ಗೀತೆ

ಕೋಲು ಮಲ್ಲಿಗೆ ಕೋಲೆನ್ನ....
ಮುಪ್ಪು ಕೋಲು ಚಿನ್ನದಿ ಕೋಲೆನ್ನ....॥

ಹಾಲೀನ ಗೂಡಲ್ಲಿ ದೇವರು ಮಾಡಾವೆಂದೂ
ಸೋದರಳಿಯುನ ಕರೆಸ್ಯಾರೆ । (ಕರೆಸಿ) ದೇವರಮಾಡಿ
ಹಾಲೀಗೆ ಮಡ್ಡ ಎರೆದಾರು....॥

ಎತ್ತೀನ ಗೂಡಲ್ಲಿ ದೇವರು ಮಾಡಾವೆಂದೂ
ಚಿಕ್ಕ ಅಳಿಯುನ ಕರೆಸ್ಯಾರೆ । (ಕರೆಸಿ) ದೇವರಮಾಡಿ
ತುಪ್ಪದಲಿ ಮದ್ದ ಎರೆದಾರು....॥

ಹಾಲೀನ ಗೂಡಲ್ಲಿ ಆಗಾಗ ಬೆಯ್ಯೋದು
ಹಾಳ ದತ್ತೂರಿ ಉರಿಮುದ್ದು। ಇಕ್ಯಾರಲ್ಲೆ
ತಾಯಿ ಚಿಣ್ಣಮ್ನ ಮಗನೀಗೆ....॥

ಎತ್ತೀನ ಗೂಡಲ್ಲಿ ಉಕ್ಕಿ ಉಕ್ಕಿ ಬೆಯ್ಯೋದು
ಕೆಟ್ಟ ಉತ್ರಾಣಿ ಉರಿ ಮದ್ದು । ಕೊಟ್ಟೋರಮನೆ
ಹಾಳಾಗಲೆಂದು ಕುಡಿದಾನು....॥

ಬಾಳೇಯ ಹಣ್ಣಿನಂಗೆ ಬಾಣಸೂಕಿದಾವಲ್ಲೆ
ರಾಯು ತುಂಬ್ಯವರೆ ಮನೆ ಮುಂದೆ । ಜುಂಜಪ್ಪ
ದಾಯಃ ನಾಡ್ಯವನೆ ತಲೆಗಳ....॥

ಇಂಜಿ ಹಣ್ಣಿನಂಗೆ ಗುಂಡು ಬಿಟ್ಟಾನಲ್ಲೆ
ಹಿಂಬು ತುಂಬ್ಯವರೆ ಮನೆಮುಂದೆ । ಜುಂಜಪ್ಪ
ಚೆಂಡ ನಾಡ್ಯವನೆ ತಲೆಗಳ....॥

# ಜುಜಂಪ್ಪ ಕುರಿತ ಪದ

ದಂಡೆ ತಾರೋ ದಂಡೇ ಸ್ವಾಮಿ....
ದಂಡೇ ಮುತ್ತಿೀನ ದಂಡೇಗಳ ।
ದಂಡಿಂಗು ದಂಡೆ ಪಿಂಡಿಂಗು ವನಮಾಲೆ
ದಂಡೆ ತಾರೋ ದಂಡೇಸ್ವಾಮಿ
ದಂಡೇ ಮುತ್ತೀನ ದಂಡೇಗಳ....||

ಮಲ್ಲಕನಾದ ಹೇ! ಮಗು ನಮ್ಮಾ
ದಂಡೇ ತಾರೋ ದಂಡೇ ಸ್ವಾಮಿ
ದಂಡೇ ಮುತ್ತೀನ ದಂಡೇಗಳ....।
ನಾಡಿನ ಹಳ್ಳಿಗೆ ಯಾರ್‍ಯಾರು ಹೊರಲಾರು
ದಂಡೇ ತಾರೋ ದಂಡೇ ಸ್ವಾಮಿ....।
ದಂಡೇ ಮುತ್ತೀನ ದಂಡೇಗಳ....||

ಪೂಜಾರಿ ಪುಟ್ಟಯ್ಯ ಹೇ! ಸಾಯುುವಾಗ
ದಂಡೇ ತಾರೋ ದಂಡೇಸ್ವಾಮಿ
ದಂಡೇ ಮುತ್ತೀನ ದಂಡೇಗಳ....।
ಪೂಜಾರಿ ಪುಟ್ಟಯ್ಯ ಸಾಯುುವಾಗ ಹೊರಟಾರು
ದಂಡೇ ತಾರೋ ದಂಡೇಸ್ವಾಮಿ....
ದಂಡೇ ಮುತ್ತೀನ ದಂಡೇಗಳ....||

ಅಪ್ಪಯ್ಯನದಟ್ಟೇಯ ಒಪ್ಪಕ್ಕೆ ನೇಯಯ್ಯ
ದಂಡೇ ತಾರೋ ದಂಡೇಸ್ವಾಮಿ........
ದಂಡೇ ಮುತ್ತೀನ ದಂಡೇಗಳ....।
ಒಪ್ಪಕ್ಕೆನೇಯೋ ಹೇ ಚಲುವಾದಿ
ದಂಡೇ ತಾರೋ ದಂಡೇಸ್ವಾಮಿ.......
ದಂಡೇ ಮುತ್ತೀನ ದಂಡೇಗಳ....||

ಅಣ್ಣಯ್ನ ದಟ್ಟೀಯ ಅಂದಕ್ಕೆ ನೇಯಯ್ಯ
ದಂಡೇ ತಾರೋ ದಂಡೇ ಸ್ವಾಮಿ....
ದಂಡೇ ಮುತ್ತೀನ ದಂಡೇಗಳ....।
ಅಂದಕ್ಕೆ ನೇಯೋ ಹೇ ಚಲುವಾದಿ
ದಂಡೇ ತಾರೋ ದಂಡೇಸ್ವಾಮಿ
ದಂಡೇ ಮುತ್ತೀನ ದಂಡೇಗಳ....॥

ಅಂದಕ್ಕೇನಯ್ಯಾ ಚಲುವೀನ ಚುಂಚನಗಿರಿ
ದಂಡೇ ತಾರೋ ದಂಡೇಗಳ....
ದಂಡೇ ಮುತ್ತಿನ ದಂಡೇಗಳ....।
ಅಪ್ಪ ಜುಂಜಪ್ನ ಹೇ ನಡುವೀಗೆ....
ದಂಡೇ ತಾರೋ ದಂಡೇಗಳ
ದಂಡೇ ಮುತ್ತೀನ ದಂಡೇಗಳ....॥

ಗುಂಡುಕಲ್ಲಿನ ಮೇಲೆ ಜಾಣ ಮುಗ್ಗನು ಹೂಡಿ
ದಂಡೇ ತಾರೋ ದಂಡೇಗಳ....
ದಂಡೇ ಮುತ್ತೀನ ದಂಡೇಗಳ....।
ಗೊಂಡೇವನೇಯೋ ಹೇ ಚಲುವಾನೆ
ದಂಡೇ ತಾರೋ ದಂಡೇಗಳ....
ದಂಡೇ ಮುತ್ತೀನ ದಂಡೇಗಳ....॥

ಗೊಂಡೇವನೇಯೋ ಚಲುವೀನ ಚುಂಚನಹಳ್ಳಿ
ದಂಡೇ ತಾರೋ ದಂಡೇಗಳ....
ದಂಡೇ ಮುತ್ತೀನ ದಂಡೇಗಳ ।
ಸ್ವಾಮಿ ಜುಂಜಪ್ನ ಹೇ ನಡುವೀಗೆ
ದಂಡೇ ತಾರೋ ದಂಡೇಗಳ....
ದಂಡೇ ಮುತ್ತೀನ ದಂಡೆಗಳ....॥

# ಕೋಲು—ಕೋಲಣ್ಣ—ಕೋಲೆ

ಕೋಲು—ಕೋಲಣ್ಣ—ಕೋಲೆ
ಕೋಲು ಕೋಲಣ್ಣ ಕೋಲೆ—
ರನ್ನಾದ ಚಿನ್ನಾದ ಬೆಳ್ಳೀಯ ಬೆತ್ತದ ಬಿದುರಿನ
ಕೋಲು—ಕೋಲಣ್ಣ—ಕೋಲೆ ।

ತಾತ ಎಂಬೋನು ಮುದುಕ
ತಾಲಿ ಎಂಬೋದು ಚಿನ್ನ
ರೊಟ್ಟಿ ಸುಡುವೋದು ರಾಗಿ ಹಿಟ್ಟು ಕಾಣೋ ಮಾವಯ್ಯ
ಕೋಲು—ಕೋಲಣ್ಣ—ಕೋಲೆ
॥ ರನ್ನಾದ ಚಿನ್ನಾದ ॥

ಊರು ಸುತ್ತಲು ಕೇರಿ
ನೀರು ತುಂಬಿದ ಭಾವಿ
ಪಾರಿ ದಾರೀಲೆಲ್ಲೊ ನೀರು ಕಾಣೊ ಮಾವಯ್ಯ
ಕೋಲು—ಕೋಲಣ್ಣ—ಕೋಲೆ
॥ ರನ್ನಾದ ಚಿನ್ನಾದ ॥

ಬಿನ್ನಾರ ಎಂಬೋದು ಹೊನ್ನು
ಹೊನ್ನು ಎಂಬೋದು ಚಿನ್ನ
ಹೊನ್ನುವರದ ಭೂಮೆಲ್ಲಾ ಚಿನ್ನ ಕಾಣೋ ಮಾವಯ್ಯ
ಕೋಲು—ಕೋಲಣ್ಣ—ಕೋಲೆ
॥ ರನ್ನಾದ ಚಿನ್ನಾದ ॥

# ಜವರಾಯ ಬಂದಾನೆ

ಜವರಾಯ ಬಂದಾನೆ ಜಗ್ಗೀಸಿ ನಿಂತಾನೆ ಕೋಲಣ್ಣ—ಕೋಲೆ
ಕೈಯಲ್ಲೊಂದು ಕುಡಿಲು ಕಡುಕತ್ತಿನಿಡಿಕೊಂಡು ಜವರಾಯ
ಕೋಲಣ್ಣ—ಕೋಲೆ
ಅವನು ನೇರುಳ್ಳ ಮರವ ಹೇ ಕಡಿದಾನೆ....
ತಬ್ಬಾಲಿ ಕುಂಬಾಳು ಹಬ್ಬೀತು ಮನೆಮೇಲೆ....
ಇಬಂದಿ ಕಾಣೋ ಯಮುದೋನು!(ಯಮುದೋ) ಇಂದ್ರು ತಿನ್ನ....
ಜವರಾಯ ಹಬ್ಬೋಗೊ ಕುಡಿಯ ಹರಿಕೊಂಡ....
ಬಾಳೇಯ ಹಾಕ್ಹೀದೆ ಸುತ್ತ ಬೇಲಿ ಕಟ್ಟೀದೆ....
ಬಾಲೆ ನಿನ ಮಗ ಸಮರಂತ ಜವರಾಯ....
ಅವನಬ್ಬೊಗೋ ಕುಡಿಯ ಹರಿಕೊಂಡ....
ಹಂದಿ ಸಾಕೀದೆ ಬಂಧ್ಹೀಯ ಮಾಡಿಸ್ಹೀದೆ....
ಬಂಧೀಯರಘಳಿಗೆ ಇಕ್ಕಲಿಲ್ಲ ಜವರಾಯ....
ನಾನಿಕ್ಕಿ ಬರುತ್ಹೀನಿ ನಡೆಮುಂದೆ....
ಇಕ್ಕಿ ಬರುವೋಕೆ ಹೆಚ್ಚೀನ ಕುಲವೇನೊ....
ಮಕ್ಕಳ ತಾಯಿ ನಡೆ ಮುಂದೆ....
ಕೋಳಿ ಮಾರೀದೆ ತಾತೀಯ ಮಾಡಿಸೀದೆ....
ಈ ತಾತಿಯರಘಳಿಗೆ ಇಕ್ಕಲಿಲ್ಲ....
ತಾತಿಯರ ಘಳಿಗೆ ಇಕ್ಕಲಿಲ್ಲ ಜವರಾಯ....
ನಾನಿಕ್ಕಿ ಬರುತ್ಹೀನಿ ನಡೆ ಮುಂದೆ....
ಇಕ್ಕಿ ಬರುವೋಕೆ ಹೆಚ್ಚೀನ ಕುಲವೇನೆ....
ದೇವೇಂದ್ರಾಗೆ ಸಾಸ್ವೆ ಇಡಬೇಕು ...
ಆಚೀ ಕೇರೀಲಿ ಮುದುಕ್ಹೀರು ಮೋಟೀರು....
ನೀನೆಲ್ಲಾರೋ ಹೋಗೋ ಏ! ಯಮುದ್ಹೋನೆ....
ಮುದುಕ್ಹೀರು ಮೋಟ್ಹೀರು ಎಂದಿದ್ರು ನನ್ನೋರು....
ಗಂಡನುಳ್ಳೋಳೆ ಹೇ ನಡಿಮುಂದೆ....
ದೇವೇಂದ್ರಾಗೆ ನಾನು ಸಾಸ್ವೆ ಇಡಬೇಕು....ಕೋಲಣ್ಣ—ಕೋಲೆ

ದಳ ೫

## ರಣ ಕಹಳೆ

ಎಂತು ಮರೆಯಲಿಬಹುದೊ ನಿನ್ನ
ಎಂತು ಮರೆಯಲಿಬಹುದೊ ನಿನ್ನ....
ಬಾಳ ಪಂಥದಲಿ ಗೆದ್ದಲ್ಲೊ ಪ್ರೌಢರಣಧೀರ....||

# ಚಿತ್ರದುರ್ಗದ ಮದಕರಿ ನಾಯಕನ ಗೀತೆಗಳು

ಮೈಲಾರಲಿಂಗನಾ ದಯವೂ ನಮಗಿರಲೊ
ಮೈಲಾರಲಿಂಗನಾ ದಯವೂ ನಮಗಿರಲೊ....।

ಮೇಲು ದುರ್ಗದ ಮೇಲೆ ಜೋಡೆರಡು ಪಿರಂಗಿ
ಚಿಂತೆ ಮಾಡದಿರೆ ತಾಯಿ ಉಚ್ಚಂಗಮ್ಮ
ನೀನು ಚಿಂತೆ ಮಾಡದಿರೆ ತಾಯಿ ಉಚ್ಚಂಗಮ್ಮ....॥

ಮೈಲಾರಲಿಂಗನಾ ದಯವೂ ನಮಗಿರಲೊ
ಮೈಲಾರಲಿಂಗನಾ ದಯವೂ ನಮಗಿರಲೊ....।

ಹೋದಂಥ ಪರಂಗಿ ತರಿಸದಿದ್ದರೆ
ಮೀಸೆ ಅಂಚನ ಹುಲ್ಲೆಂದು ಕುಯ್ಯೆ....ಉಚ್ಚಂಗಮ್ಮ
ನೀನು ಮೀಸೆ ಅಂಚಿನ ಹುಲ್ಲೆಂದು ಕುಯ್ಯೆ....।

ಮೈಲಾರಲಿಂಗನಾ ದಯವೂ ನಮಗಿರಲೊ
ಮೈಲಾರಲಿಂಗನಾ ದಯವೂ ನಮಗಿರಲೊ....।

ಗುಂಡು ಬರುತಾವೆಂದು ಅಂಜದಿರು ಜಂಪಣ್ಣ ।
ನೀನು ಅಳುಕದಿರು ಜಂಪಣ್ಣ....।
ಗುಂಡಲ್ಲಾ ಗುಂಗಾರಿ ಹುಳುವು....
ಅವು ಗುಂಡಲ್ಲಾ ಗುಂಗಾರಿ ಹುಳುವು....।

ಮೈಲಾರಲಿಂಗನಾ ದಯವೂ ನಮಗಿರಲೊ
ಮೈಲಾರಲಿಂಗನಾ ದಯವೂ ನಮಗಿರಲೊ....।

ಕತ್ತಿ ಬರುತಾವೆಂದು ಬಾಗದಿರು ಜಂಪಣ್ಣ
ನೀನು ಜಗ್ಗದಿರು ಜಂಪಣ್ಣ
ಕತ್ತ್ಯಲ್ಲಾ ಕೋಳಿಯ ಗರಿಯೂ
ಅವು ಕತ್ತ್ಯಲ್ಲಾ ಕೋಳಿಯ ಗರಿಯೂ....।

ನೀರತಡಿ ರಂಗಯ್ನ ದಯವೂ ಒಂದಿರಲೊ
ನಮಗೆ ನೀರತಡಿ ರಂಗಯ್ನ ದಯವೂ ಒಂದಿರಲೊ ।

ಬಾಣ ಬರುತಾವೆಂದೂ ಬಾಗದೀರು ಜಂಪಣ್ಣ
ನೀನು ದುಡುಕದೀರು ಜಂಪಣ್ಣ....।
ಬಾಣಲ್ಲಾ ಬತ್ತಿಯ ಕಡಿಯೂ
ಅವು ಬಾಣಲ್ಲಾ ಬತ್ತಿಯ ಕಡಿಯೂ....।

ಸಂಪಿಗೆ ಸಿದ್ದಯ್ನ ದಯವೂ ನಮಗಿರಲೊ
ನಮಗೆ ಸಂಪಿಗೆ ಸಿದ್ದಯ್ನ ದಯವೂ ನಮಗಿರಲೊ....।



# ಏನು ಹೇಳಲೊ ನಿನ್ನ ಬಿರುದಾ

ಏನು ಹೇಳಲೊ ನಿನ್ನ ಬಿರುದಾ
ಮೆದಕೇರಣ್ಣಾ ಏನು ಹೇಳಲೊ ನಿನ್ನ ಬಿರುದಾ....।
ಮೇಲುದುರ್ಗಕೆ ಸುತ್ತ ಕೋಟೆಯು ಕಟ್ಟಿಸಿದ
ಮೆದಕೇರಣ್ಣಾ ಸುತ್ತ ಕೋಟೆಯು ಕಟ್ಟಿಸಿದ....॥

ಮತ್ತೆ ಜೋಡೊಂಡಾವ ತೆಗೆಸೀದಾ
ಮೆದಕೇರಣ್ಣಾ ಮತ್ತೆ ಜೊಡೊಂಡವಾ ತೆಗೆಸೀದಾ
ತನ್ನ ಸತಿ ಉಚ್ಚಂಗವ್ವೆ ಕಲ್ಲು ಮಠವಕಟ್ಟಿಸಿದ
ಮೆದಕೇರಣ್ಣಾ ಉಚ್ಚಂಗವ್ವೆ ಕಲ್ಲು ಮಠವ ಕಟ್ಟಿಸಿದ....॥

ಹೊರಹೊಂಡ ಒಳಹೊಂಡ ಒಳಗೆನಾಲ್ಕು ಹೊಂಡ
ಮೇದಕೇರಣ್ಣಾ ಒಳಗೆನಾಲ್ಕುಹೊಂಡ ತೆಗೆಸೀದಾ....।
ಇಂಥ ಸಿರಿದೇವಿಯು ಮಠವ ಕಟ್ಟಿಸಿದಾ
ಮೆದಕೇರಣ್ಣಾ ಸಿರಿದೇವಿಯು ಗುಡಿಯು ಕಟ್ಟಿಸಿದಾ....॥

ದುರ್ಗದ ಸಿರಿದೇವಿಯು ಮಜ್ಜನಕೆ
ಮೆದಕೇರಣ್ಣಾ ಸೀನೀರು ಹೊಂಡವ ತೆಗೆಸೀದಾ
ಜಲವ ಲೇಪಿಸಿದ ಮೇಲು ದುರುಗಾಕೆ
ಮೆದಕೇರಣ್ಣಾ ಜಲವ ಲೇಪಿಸಿದಾ....॥

ಏಳು ಲಕ್ಷ ಸೀಮೆಯೊಳಗೆ ಏಳುನೂರು ಕೆರೆಬಾವಿ ಕಟ್ಟಿಸಿದಾ
ಮೆದಕೇರಣ್ಣಾ ಏಳುನೂರು ಕೆರೆಬಾವಿ ಕಟ್ಟಿಸಿದಾ....।
ಏನು ಹೇಳಲೊ ನಿನ್ನ ಬಿರುದಾ
ಮೆದಕೇರಣ್ಣಾ ಏನು ಹೇಳಲೊ ನಿನ್ನ ಬಿರುದಾ....॥

# *ನಾಯಕನ ರಥವ ಕುರಿತು ಹಾಡುವ ಹಾಡು

ರಥವ ನೋಡೋಣ ಬನ್ನಿರೊ ಗೆಣೆಯರೆ
ದುರುಗದ ರಥವ ನೋಡೋಣಾ ಬನ್ನಿರೊ....।
ಮೆದಕೇರೆಣ್ಣಾನ ರಥವ ನೋಡೋಣಾ ಬನ್ನಿರೊ
ಅರಸು ಮೆದಕೇರಣ್ಣಾನ ರಥವ ನೋಡೋಣಾ ಬನ್ನಿರೊ....॥

ರಥಕೆ ರನ್ನದ ಗಾಲಿ ಮೇಲೆ ದೊಡ್ಡಬಾಪುರಿ ಜಂಗಿ
ಮೆದಕೇರಣ್ಣಾನ ಸೂತ್ರಾದ ರಥವೂ....।
ರಥದ ಮೇಲೆ ವಜ್ರದ ಕಂಭ ದುರ್ಗದ ಮನೆಗಾರ
ಮೆದಕೇರಣ್ಣಾ ದುರ್ಗದ ಮನೆಗಾರ....।

ದುರ್ಗದ ಮನೆಗಾರ ಕಾಮಗೇತಿ ಏರಿ ಬರುವಂಥ
ಮೆದಕೇರಣ್ಣಾನ ರಥವ ಚಂದೂರು ಬಾಣಾಗಾರರು
ಬಡಗಿಯರು ಕಾಮಾಟಗಾರರು....।
ಸಂಗಡಿದಾರರು ಇಂಗಡಿದಾರರು ಅಹಲೇದಾರರು....।

ಒಕ್ಕಳಗಂಟೆ ಹುಲಿಯಚರ್ಮ
ಮೆದಕೇರಣ್ಗೆ ಮುಕ್ಕಣ್ಣ ಸುತ್ತು ಪಂಚಕಳಸಾ....।
ಎಡಭರ್ಜಿ ಬಲ ಭರ್ಜಿಗಳು
ಮೇದಕೇರಣ್ಗೆ ಮೇಲುದುರುಗದ ಹುಜರಾತಿಗಳು....।

ರಥವ ನೋಡೋಣಾ ಬನ್ನಿರೊ ಗೆಣೆಯರೆ
ದುರುಗದ ರಥವ ನೋಡೋಣಾ ಬನ್ನಿರೊ ।
ಮೆದಕೇರಣ್ಣಾನ ರಥವ ನೋಡೋಣಾ ಬನ್ನಿರೊ
ಅರಸು ಮೆದಕೇರಣ್ಣಾನ ರಥವ ನೋಡೋಣಾ ಬನ್ನಿರೊ....।

---

*ಚಿತ್ರದುರ್ಗದ ಪಾಳೆಗಾರನಾದ ಮದಕರಿನಾಯಕನ ಕುರಿತು ಹಾಡುವ ಹಾಡುಗಳನ್ನು ಚಿತ್ರದುರ್ಗದ ಗೆಳೆಯ ಶ್ರೀ ಪಿ. ಆರ್. ತಿಪ್ಪೇಸ್ವಾಮಿಯವರು ಈ ಸಂಕಲನದಲ್ಲಿ ಸೇರಿಸಲು ಅನುಮತಿಯಿತ್ತಿದ್ದಾರೆ, ಅವರಿಗೆ ತುಂಬ ಋಣಿಯಾಗಿದ್ದೇನೆ.

## ನಾಯಕನ ರಥವ ಕುರಿತು ಹಾಡುವ ಹಾಡು

ಕಸ್ತೂರಿ ಭಂಟ ಕಾದಿ ಬರುವೊ
ಮೆದಕೇರಣ್ಣಾ ಕಾಮಗೇತಿ ಏರಿ ಬರುವಂಥ
ರಥವ ನಡಸುವರಣ್ಣ ಕಲಿಕೆ ತುರಾಯುದವರು
ಗಚ್ಚು ಚಿನ್ನದದಾಗು ಸುತ್ತಿದವರ....।
ಚಿನ್ನದ ಹಿಡಿಪಗ್ಗ ಬೆಳ್ಳಿ ಮೂಗುದಾಣ
ಸ್ವಾಮಿ ಸಿದ್ಧರಂಗ ಚಂದ್ರ ಮೌಳೀಷನು
ರಥನೇರಿ ಬರುವಂಥ....।

ಎತ್ತಿನ ಕೊರಳಿಗೆ ಮುತ್ತಿನ ದಂಡೆ ಕೋಡಣಸು ಮಕರಂಬಣ್ಣ
ನಾಲ್ಕು ಮೂಲೆಗೆ ನಾಲ್ಕು ಲೋಡು ಹಾಕದಜಂಗಿ ಗಗ್ಗರಗಾಲು..।
ಏಳು ಮಂದಿ ಸಿದ್ದರಿಗೆ ಏಕವಾಗಿ ನಡೆವಂಥನೇಕ
ಮದಕೇರಣ್ಣಾ ಮುಂಗಲಿ ಕಾಮಗೇತಿ ಭೂಪನೇರುವ ರಥವಂತೆ....।

ಹೂಡಿಹೆವು ಎಂಟೆತ್ತು ತೂಗು ಮಂಚವು ರಂಜಿಸೆ
ನೆತ್ತಿ ಮೆಲೊಂಭತ್ತು ಕಳಸ....।
ಅರಸು ಬಂದ ಭರಮಪ್ಪ ಅರಸು ಬಂದ ಮೆದಕೇರಪ್ಪ
ದುರುಗದ ಅರಸು ಬಂದ ಮೆದಕೇರಪ್ಪ....।

ದುರುಗದ ಅರಸು ಬಂದ ವ್ಯಾಳ್ಯಾದಲಿ ರಥವೇರುವಂಥ
ರಥವ ನೋಡೋಣಾ ಬನ್ನಿರೊ ಗೆಣೆಯರೆ
ದುರುಗದ ರಥವ ನೋಡೋಣ ಬನ್ನಿರೋ....।

ದುರುಗದ ರಥವ ನೋಡೋಣಾ ಬನ್ನಿರೋ
ಮೆದಕೇರಣ್ಣಾನ ರಥವ ನೋಡೋಣಾ ಬನ್ನಿರೋ
ಅರಸು ಮೆದಕೇರಣ್ಣಾನ ರಥವ ನೋಡೋಣಾ ಬನ್ನಿರೊ...।

# ಮದಕರಿ ನಾಯಕನನ್ನು ನೆನೆದು....

ಎಂತು ಮರೆಯಲಿಬಹುದೊ ನಿನ್ನ
ಎಂತು ಮರೆಯಲಿಬಹುದೊ ನಿನ್ನ....।

ಬಾಳ ಪಂಥದಲಿ ಗೆದ್ದಲ್ಲೊ ಪ್ರೌಢರಣಧೀರ
ನೀನು ಬಾಳ ಪಂಥದಲಿ ಗೆದ್ದಲ್ಲೊ ಪ್ರೌಢರಣಧೀರ....।

ಹ್ಯಾಗೆ ಮರೆಯಲಿಬಹುದೊ ನಿನ್ನ
ಎಂತು ಮರೆಯಲಿಬಹುದೊ ನಿನ್ನ....ಪ್ರೌಢರಣಧೀರ....।

ಲೇಸೀಗೆ ಹೊರಟಪ್ಪ ಏಸೂರು ಕಡೆದಪ್ಪ
ನೀನು ಏಸೂರು ಕಡೆದಪ್ಪ....।।

ರಾಯಚೂರು ನಿಡಿಗಲ್ಲು*
ರಾಯ ಜಂತರಕಲ್ಲು*

ಕುರುಕೋಡು ಕುಂದುರ್ಪ*
ಕುಂದುಪನಾ ಬಳ್ಳಾರಿ*

ಆಲೂರು ಬೇಲೂರು*
ಹಟ್ಟೀಯ ಜಗಳೂರು*

ಎಂತು ಮರೆಯಲಿಬಹುದೊ ನಿನ್ನ
ಎಂತು ಮರೆಯಲಿಬಹುದೊ ನಿನ್ನ....।

ಬಾಳ ಪಂಥದಲಿ ಗೆದ್ದಲ್ಲೊ ಪ್ರೌಢರಣಧೀರ
ನೀನು ಬಾಳಪಂಥದಲಿ ಗೆದ್ದಲ್ಲೊ ಪ್ರೌಢರಣಧೀರ....।

---

*ಈ ಸೂಚನೆ ಗುರುತಿನಲ್ಲಿ ಕಾಣುಬರುವ ಊರುಗಳು ಈಗಲೂ ಕೂಡ ಇವೆ. ಈ ನಗರಗಳನ್ನು ಚಿತ್ರದುರ್ಗದ ಪಾಳೆಗಾರನಾದ ಮದಕರಿನಾಯಕನು ಗೆದ್ದು ವಶಪಡಿಸಿಕೊಂಡಿದ್ದನೆಂದು ತಿಳಿದು ಬರುತ್ತದೆ. ಇತಿಹಾಸದಿಂದ ಹಾಗೂ ಈ ಜಾನಪದ ಗೀತೆಗಳ ಆಧಾರದಿಂದ.

## ಮದಕರಿ ನಾಯಕನನ್ನು ನೆನೆದು...

ಅಪ್ಪ ನಿನ ಅರಮನೆ ಸುತ್ತೇಳು ಗಾವುದಾ
ನಿನ ಅರಮನೆ ಸುತ್ತೇಳು ಗಾವುದಾ
    ಪ್ರಧಾನಿ ಮಂತ್ರಿಗಳಿಗೆ ಕಟ್ಟದಾ ಕೈಶಾಲೆ
    ನೀನು ಕಟ್ಟಸಿದ ಕೈಶಾಲೆ....॥

ಪಟ್ಟಮಂಚದ ಮೇಲೆ ಮಲಗಿರುವ ದೊರೆಯೆ
ಬಾಳ ಪಂಥದಲಿ ಗೆದ್ದಲ್ಲೊ ಪ್ರೌಡರಣಧೀರ
ನೀನು ಬಾಳ ಪಂಥದಲಿ ಗೆದ್ದಲ್ಲೊ ಪ್ರೌಡರಣಧೀರ....।
    ಹ್ಯಾಗೆ ಮರೆಯಲಿಬಹುದೊ ನಿನ್ನ
    ಎಂತೂ ಮರೆಯಲಿಬಹುದೊ ನಿನ್ನ ಪ್ರೌಡರಣಧೀರ....।



# ದೈವಾಗೊ ನೀರತಡಿರಂಗಾ....

ಓ ! ರಂಗೂ ರಂಗಾವೊ ಓ ! ರಂಗಾವೊ
ಓ ! ರಂಗಯ್ಯ ನನ್ನಮೇಲೆ ದೈವಾಗೋ ನೀರತಡಿರಂಗಾ....।
ಕಾಕುಂಬೆ ಕಡಲೆ ಕೈಯಲಿಡಿಕೊಂಡು .
ಮಾತಾಡಿಸಯ್ಯ ಮಡದಿಯ ರಂಗಾ
ನೀ ತಂದ ಬಣ್ಣ ಹೆಸರೇಳೊ ನೀರತಡಿರಂಗಾ....।
ಹೆಸರು ಹೇಳೊದಲ್ಲಾ ಬಿಸಲೀಗೆ ತೋರೋದಲ್ಲಾ
ಅರಸಾರಗೊಡವೆ ಅದಕಿಲ್ಲಾ ನೀರತಡಿರಂಗಾ।
ಅರಸಾರಗೊಡವೆ ಅದಕಿಲ್ಲಾ ಸೀರೇಯ....
ಒಲೆಯಮೇಲೆ ಒಗಿಸಿದ ಒಣ್ಣಾವ
ತಾಲೀಯಮೇಲೆ ತಳುಕೀದಾ ನೀರತಡಿರಂಗಾ....।
ಓ ! ರಂಗೂ ರಂಗಾವೂ ಓ । ರಂಗಾವೂ....
ತಾಲೀಯಮೇಲೆ ತಳುಕೀದಾ ಬಣ್ಣಾವನಲ್ಲಿ
ಮರದಡಿಯ ನರುಗಿಡಿದ । (ರಂಗಯ್ಯ) ಬಣ್ಣಾದನಾರಿ
ಲಕ್ಕವ್ವಾಗೆ ಉಡುಸೀದಾ ರಂಗಾ....।
ಪುಟ್ಟರಾಜಣದ ಮಡಲಕ್ಕಿ। (ರಂಗಾ) ಹುಯ್ಕೊಂಡು
ನೀರತಡಿರಂಗಯ್ಗೆ ಧಾರೆ ಎರೆದಾರು....।
ಓ ! ರಂಗೂ ರಂಗಾವೊ ಓ । ರಂಗಾವೊ....
ರಂಗಯ್ನ ಮನೆ ಮುಂವೆ ಇಂಬೆ ಚಪ್ಪರೂಟ
ಅಂಬಾರದಿಂದ ಹರಿಬಂದೊ । ರಂಗಯ್ಯ
ನಿನ್ನ ಮದ್ವೆಸ್ವಾಮಿ ಶನಿವಾರ....।
ಅರಸಿಕೆರೆಯಿಂದ ತರಿಸ್ಯಾರು ಬಣ್ಣಾವ
ಬರಿಸ್ಯಾರು ನೀಲ ಕುದುರೇಯ....। ಚಂದರಗಿರಿಯ
ಜ್ಯೋತಿ ಬಡಿದ್ಯಾವೂ ಸೆರಗೀಗೆ ರಂಗಾ....।
ಓ ! ರಂಗೂ ರಂಗಾವೂ ಓ । ರಂಗಾವೊ....
ಓ ! ರಂಗಯ್ಯ ನನ್ನಮೇಲೆ ದೈವಾಗೊ ನೀರತಡಿರಂಗಾ....।

## ಬಿಡಿ ಹೂ

ಅಡುವಾಗ ಇಕ್ಕುವಾಗ ಗಿಡವೆಲ್ಲಾ ನಂಟಾರು
ಅಡವೀಯ ಸೊಪ್ಪು ಮಡಿಲೊಡ್ಡಿ । ಕುಯ್ವ್ಯಾಗ
ಹಡೆದವ್ವ ಗುರುತು ಹಿಡಿಯಾಳು....॥



‘ ಜೋಳಾದ ಹೊಲದಲ್ಲಿ ಜೋಡಟ್ಟೆ ಹಾಕ್ಕೊಂಡು–ಕಾಯುವವನ ಕೈಲಿ ಕವಣೇಯು ’

# ಬಿಡಿ ನುಡಿಗಳು

ಹಾಸಿಗೆ ಹಾಸಿ ಯಾಕು ನಿಂತೆ ಎಲೆ ಹೆಣ್ಣೇ
ನಾ ಹಾಚೆ ಹೋಗ್ತೀನಿ ಸೊಬಗೀನ । ಸೂಳೆಮನೆಗೆ
ನೀನು ಹಾಕೆ ವಜ್ರಾದ ಅಗಣೇಯಾ....॥

ಸೂಳೆ ಮನೆಗ್ಹೋದೋರು ಸುಮ್ನೆ ತಾವು ಬಂದಾರು
ತೆಗಿ ತೆಗಿ ಚಿನ್ನಾವೆ ತೆಗಿ ತೆಗಿ ರನ್ನಾವೆ
ತೆಗಿ ನನ್ನ ಕೊರಳ ಪದಕಾವೆ....॥

ತೆಗಿಯೆ ನನ್ನ ಪದಕಾದ ಪಟ್ಟಣದ ರಾಣಿ
ನೀನು ತೆಗಿಯೆ ವಜ್ರಾದ ಅಗಣೀಯಾ....ಪಟ್ಟಣದ ರಾಣಿ
ನೀನು ತೆಗಿಯೆ ವಜ್ರಾದ ಅಗಣೇಯು....॥

ಅಗಣೀಯು ತೆಗಿಯುದಕೆ ಅಪ್ಪಾಣೆ ನನಗಿಲ್ಲಾ
ನಮ್ಮತ್ತೇಯು ಮಗಳು ಅತಿಗಮ್ಮ । ಅವಳು
ಅವರೇಳಿ ಅಪ್ಪಾಣೆ ಕೊಡಬೇಕು....॥

ಕುಂತು ಕುಣಿಗಲು ಗೆದ್ದೆ ನಿಂತು ನವಿಲೂರು ಗೆದ್ದೆ
ಮಾತಿನಲ್ಲಿ ಗೆದ್ದೆ ಮಧುರೇಯು । ಮೈಸೂರ
ನೀತೀಲಿ ಗೆದ್ದೆ ಬಿಳಿಯುಲೆಯು....॥

"ಜೋಳಾದ ಹೊಲದಲ್ಲಿ ಜೋಡಟ್ಟೆ ಹಾಕ್ಕೊಂಡು
ಕಾಯುವವನ ಕೈಲಿ ಕವಣೇಯು" । (ಕವಣೇಯ) ಕಂಚಿನ್ಗುಂಡು
ಅವನು ಸಾರಿ ಹೊಡೆದಾನು ಗೀಜಗನಿಂಡು....।

ಹಾಳಾದ ಜೀವಾವೂ ಏನೇನ ಬಯಸೀತೊ
ಈರ್ನಗಿರಿಯಾಚೆ ಮೈಸೂರು । (ಮೈಸೂರ) ಬೀದೀಲಿ
ಈರುಳ್ಳಿ ಮಾರೋ ಹುಡುಗೀಯು....॥

ಮಲೆಯೊಳಿದ ಹೆಣ್ಣೆ ನಿನ್ನ ಮಂಡೆಗೆ ತೆಂಗಿನೆಣ್ಣೆ
ಕೊಂಬೀನ ಬಾಚಣಿಗೆ ಮಡಿಲಲ್ಲಿ । ಇಟುಕೊಂಡು
ನೀನು ಮಲೆಯೊಳ್ದ ಬಾಷೆ ತಿಳಿದೇಳೆ....॥

ಪಟ್ಣಾದ ಹುಡುಗೀಗೆ ಹೊಟ್ಟೆಯಲ್ಲಿ ಕರುಳಿಲ್ಲಾ
ಕೊಟ್ಟೆನೆಂದಾರೆ ಕೈಲಿಲ್ಲಾ । ಈ ಚೆಲುವೆ ಹೆಣ್ಣಾ
ನಾನು ಬಿಟ್ಟನೆಂದಾರೆ ಮನಸಿಲ್ಲಾ....॥

ಓಣೀಲಿ ಹೋಗೋಳೆ ಜಾಲ ತುರುಬಿನೋಳೆ
ಬಿತ್ತಲ್ಲೆ ಗ್ಯಾನ ನಿನಮೇಲೆ । ಮೈಸೂರ
ಸಂಬಾಳ ಬಿಟ್ಟು ನಾನು ಬರುತೀನಿ....॥

ಆಯತ್ವಾರ ಹಕ್ಕಿ ಬೇಟೆ ಸೋಮ್ವಾರ ಗಿಡಗನ ಬೇಟೆ
ಸಾರಗನ ಬೇಟೆ ಶನಿವಾರ । ಶೆಟ್ಟಳ್ಳಿ
ಕೋರುಡಿಗಿರ ಬೇಟೆ ಬೆಳಗಾನ....॥

ನೀರಿಗ್ಹೋಗಾನ ಬನ್ನಿ ನಿಜಗಲ್ಲು ದುರುಗಾಕೆ
ನೀರಿದ್ದವೆಣ್ಣೆ ಕುಡಿಯೋಕೆ । ಜಾಲಾದ
ಮೊಗಿದ್ದವೆಣ್ಣೆ ಮುಡಿಯೋಕೆ....।

ಬಿದನೂರ ಹೆಣ್ಣೆ ಮದಗದೇರಿಯ ಮಣ್ಣೆ
ನಿನಗಿರುವುದುಂಟೆ ದೊರೆಮಗ । ಅಣ್ಣಯ್ಯ
ಗಿಡಕೊಂದು ಹೂವ ಮುಡಿಯೋರು....॥

ಸಂಜೆ ಕಸಗುಡಿಸಿ ರಂದೆ ದೀಪವನಚ್ಚಿ
ಕರುಬಾನ ತೊಳೆದು ಕರುಬಿಡೆ । ಎಲೆ ಹೆಣ್ಣೆ
ಶ್ರೀ ಹರಿ ನಮ್ಮನೆಗೆ ಉಣ ಬಂದಾ....॥

ತಾಟಗಿತ್ತಿ ಹೆಣ್ಣೆ ತೋಟಾಕೆ ಬರಹೇಳೆ
ತೋಟದಲವನೆ ಕರಿ ಚೆಲುವ । ತಮ್ಮಯ್ಯ
ನೀನ್ಹೋಗಿ ಅವನ ಕರೆತಾರೆ....॥

ಬಿದನೂರ ಸೂಳೆ ಬೀಸಣಿಗೆ ಕಳಿವಾಳೆ
ಚದುರ ಕಂದಣ್ಣ ಮನಗೂವ। (ಮನಗೊ) ಮಂಚದಮೇಲೆ
ಅವಳು ಉದುರು ಮಲ್ಲಿಗೆಯ ಕಳಿವಾಳು....॥

ಕುಟ್ಟೇದ ಅಕ್ಕೀಲಿ ಕುಸುಮಾವ ತೆಗಿಯೋಳೆ
ನೆಲ್ಲಿ ಕಾಯೊಳಗೆ ಒಳನಾರ। (ಒಳನಾರು) ಎತ್ಯಾಳೆ
ನೀನು ಎಲ್ಲಿ ತಂದಪ್ಪ ಕಡಿ ಚೆಲುವೇಯು....॥

ನನ್ನ ಸಂಗಾತಿಯೆಣ್ಣೆ ಜಂಬುನೇರಲೆಹಣ್ಣೆ
ಜಂತಲ್ಲೆ ಇರುವ ಕಡುಜೇನ। ಗೂಡಿನಂಗೆ
ನೀನಿದ್ದಾರೆ ಮುಂಗಾರು ಮಿಂಚು ಹೊಳೆದ್ಹಂಗೆ....॥

ಕಾಚು ಹಾಕಿದ ಬಾಯಿ ಬಾಚಿ ಕಟ್ಟಿದ ಮಂಡೆ
ನಗೆ ನುಡಿಯಿಲ್ಲಾದ ಪತಿ ಪುರುಷಾರು। ಇದ್ದಾರೆ
ಹಗಲು ಕತ್ತಾಲೆ ಕವಿದಾವು....॥

ಮೈಸೂರ ಹೆಣ್ಣೀಗೆ ಮಯ್ಯೆಲ್ಲಾಸಂಪೀಗೆ
ಮಂಚಾದ ಕೆಳಗೆ ಎಳನೀರು। ಇಂಬೆಹಣ್ಣು
ಮೈಸೂರ ಮಹಾರಾಣಿ ಕಳಿವ್ಯಾಳು....॥

ನೀರಲಿ ನಿಂತುಕೊಂಡು ದೂರಾದ ಮಾತೇನೊ
ಬಾರಾಲ ಬರ್ಪ ಬಯಲೀಗೆ। ನಂತಾರ
ಮೈಸೂರ ಜೋಡು ಪಿರಂಗಿ ಎದುರೀಗೆ ॥

ಕುಣಿಯಾಲೊ ಎಂದಾರೆ ನಾನೇನ ಕುಣಿಯಾಲಿ
ಕಣದಲ್ಲಿ ಮಾರೊ ಕಣಕಡ್ಡಿ। ಹಾಯ್ಕೊಂಡು
ಕುಣಿಯಾಕೆ ಕಾಲು ಬರದಲ್ಲೊ....॥

ಯಾಲಕ್ಕಿ ಎಳ್ಳು ಸಣ್ಣ ಜೀರೀಗೆ ಮೆಂತ್ಯಾವು ಸಣ್ಣ
ನೀರಿಗ್ಹೋಗೊ ಬಾಲೇಯು ನಡುಸಣ್ಣ। ಗಿಡಸಣ್ಣ
ಮುಂದೆ ಹೋಗೂವ ಬಾಲೆ ಕೊಡಿರಣ್ಣ....॥

ಎತ್ತೀನ ದಾವಾಣಿ ಸುತ್ತೇಳು ಗಾವುದ
ಎತ್ತಿಡಿಯೆ ನಾರಿ ಹಣತೇಯ । ಶ್ರೀರಾಮಾರ
ಎತ್ತು ದಾವಣಿಗೆ ಬರುತಾವೆ....॥

ಹೂಡೀದ ಗಾಣಾ ಹೂಡಿದಂಗಿರಲಿ
ಸೀರೇದ್ವ ರೇವತಿ ನದಿಯಲ್ಲಿ । ನಮುಕೋಣ
ಬೋರಾಡಿ ಹಾಲ ಕರೆದಾವು....॥

ನಾಕೂರಾರ ಹೆಣ್ಣು ನಿನಮೇಲೆ
ಬಾಲೇರ ಕಣ್ಣು ನಿನ ಲೀಲೆ । ಗೆಣೆಯ
ನೀನು ಎಳದೀಡೊ ಭೀಮ ಬಂಗೀಯ....॥

ಅರಗೀನ ತೋಟಾಕೆ ಪುಣಗೀನ ಬೇಟೆಗೆ ಹೋಗಿ
ಬಾಳೀಯ ತೋಳಲ್ಲಿ ಒರಗಿದ್ದೆ । ಎಲೆನಾರಿ
ನೀನು ಕಾಲೀಗೆ ನೀರ ತಾರೆ ಕಡಿಜಾಣೆ....॥

ನಾನು ಕಾಲಿಗೆ ನೀರು ಕೊಡುವಾಕೆ
ನಿನಗಿಂತ ಅತಿ ಚೆಲುವ । (ಮನೆಯಾತ) ಮನೆಯಾತಾನ
ಕುಟ್ಟಾಡಿ ನಾನು ನೆನ್ನಿಂದ ನೀರ ತರಲಿಲ್ಲಾ....॥

ನಾನು ತರುವಾಗ ನೀನಿನ್ನು ಚಿಕ್ಕವಳು
ಎಲ್ಲಾಡಿ ಕಲಿತೆ ಎಲೆ ಹೆಣ್ಣೇ....। ನಾನು
ಒಪ್ಪೀದೆ ನಿನ್ನ ಜಾಣತನಕೆ....॥

ನಿನ್ನ ಒಪ್ಪುಳ್ಳ ಮಾತೀಗೆ....
ನಾನು ಮುತ್ತ ತರಿಸೂವೆ ಕೊರಳೀಗೆ....ಎಲಬಾಲೆ
ನಾನು ಮುತ್ತ ತರಿಸೂವೆ ನಿನ ಕೊರಳೀಗೆ....॥

ಮಲೆಸೀಮೆ ಹೆಣ್ಣೀನ ಮಾತೊಂದು ಚೆಲುವೀಗೆ
ಮಾತಾದರೇನು ಗುಣವಿಲ್ಲಾ । ಗುಂಡೀಯ ನೀರು
ತಿಳಿಯಾದರೇನು ರುಚಿಯಿಲ್ಲಾ....॥

ಉತ್ರಾಸಕಿದುರಾಗಿ ಮುತ್ತು ಪೋಣಿಸೊ ಹೆಣ್ಣೆ
ಮತ್ತೇನು ಕಂಡೆ ಸ್ವಪ್ನಾವ....ಎಲೆ ಹೆಣ್ಣೆ
ನೀನು ಮತ್ತೇನು ಕಂಡೆ ಸ್ವಪ್ನಾವ....||

ಸ್ವಪ್ನ ಕಂಡಾಳೆ ಮನಸು ಮುರಿದೆದ್ದಾಳು
ಅಳುತಾ ಹೋದಾಳೆ ತವರೀಗೆ....ತಂಗ್ಯಮ್ಮ
ಅಳುತಾ ಹೋದಾಳೆ ತವರೀಗೆ....||

ಅಳುತಾ ಹೋಗಿ ತವರೂರಪ್ಪಾಜಿ ಕುಟ್ಟಿ
ದೊರೆಮಗ ಇನೊಬ್ಬರಾಣಿ ತರುತಾನೆ....ಅವನು
ಇನ್ನೊಬ್ಬ ರಾಣಿ ತರುತಾನೆ....||

ತಂದಾರು ತರಲೇಳೆ ನಿನಗಿಂತ ಚೆಲುವೇಯು
ಬಂಡಿ ಮೇಲವರೆ ಮಗದೀರು....ಅವರು
ಬಂಡಿ ಮೇಲವರೆ ಮಗದೀರು....||

ಆಯಿತವಾರ ಸಂತೇಲಿ ಹಗ್ಗೇನೆ ತಗ್ಗೇನೆ
ಬಗ್ಗಿ ಸಣ್ಣಕ್ಕಿ ಅಳೆಯೋಳ | ಮಡಿಲಲ್ಲಿ
ಅಗ್ಗ ಕಾಣವ್ವಬಿಳಿಯಾಲೆ....||

ಮಂಚಕೆಹಾಸಿ ನೀನು ಯಾಕುನಿಂತೆ ಎಲೆ ಹೆಣ್ಣೆ
ಆತ ಹೋಗ್ಯವನೆ ಹಡಗೀನ | ಸೂಳೀಯು ಮನೆಗೆ
ನೀನು ಹಾಕೆ ವಜ್ರಾದ ಅಗಣೀಯು....||

ಅಣ್ಣಯ್ಯ ಅರಮನೇಲಿ ತಮ್ಮಯ್ಯ ಸೂಳೆ ಮನೇಲಿ
ಪನ್ನೀರಗಿಂಡಿ ನಡುಮನೇಲಿ | ಇಟ್ಟುಕೊಂಡು
ಸುಣ್ಣಾಕೆ ನೂರಾಳ ಕಳಿವಾನು....||

ಮಳಲಿ ಮೂವನೂರು ಮಳಲಿಲ್ಲಾದ ಹೆಣ್ಣೆ
ನಡುಬಗ್ಗಿ ಕುಯ್ಯೋ ದವನಾವ | ಎಲೆ ಹೆಣ್ಣೆ
ದವನ ಪಚ್ಚೆ ತೆಗೆಯೆ ಮುಡಿಯಾಲಿ....||

## ಮಲ್ಲಿಗೆ ನಗುತಾವೆ

ಹಂಗರದ ಹೂ ಚೆಂದ ಹುಲ್ಲೇಯ ಮರಿ ಚೆಂದ
ಎಳೆಗಿನೆಮ್ಮೆ ಕರು ಚೆಂದ । (ಚೆಂದಾಗಿರೆ) ಎಳಗೀನ
ಹುಡುಗೀಯ ಮೊಖಚೇಂದ....॥

ನುಗ್ಗೆ ಮರದಡಿಯ ಬಗ್ಗಿ ಚೆಂಡಾಡೋನೆ
ಬುದ್ಧಿವಂತರ ಮಗ ನನತಮ್ಮ । ಆಡಿದ ಚೆಂಡು
ಹಾರ್‍ಯಾದೆ ಸೂಳೆ ಅರಮನೆಗೆ....॥

ಸಂತೆಗ್ಹೋಗೋಳೆ ಕೆಂಪಿನುಂಗುರದೋಳೆ
ಚಿಂತಿಲ್ಲವೇನೆ ಮನದಲ್ಲಿ । ನಿಮ ರಾಜ
ಮಂಚಕೊಬ್ಬಾಳ ರಾಣಿ ತರುತಾನೆ....॥

ತಂದಾರು ತರಲೇನು ನನಗಿಂತ ಚೆಲುವೀಯ
ನಾನಾಡಿ ಬಿಟ್ಟ ಪಗಡೇಯ । (ಪಗಡೆ) ಪಚ್ಚೆತೆನೆಯ
ಮತ್ತೊಬ್ಬ ರಾಣಿ ಮುಡಿಲ್ಹೇಳು....॥

ಮುತ್ತೀನ ಹರಿಗೋಲು ಮುಗಿಲು ಬಾಣದ ಕುಂಟೆ
ಆರಗದವೆರಡು ನವರತ್ನ । ಕಟ್ಟಿಕೊಂಡು
ಜಾಣ ಅರವುತಾನೆ ಜವನಾವ....॥

ಹಳ್ಳಾದ ಸಾಲಲ್ಲಿ ಮಲ್ಲಿಗೆ ಕುಯ್ಯೋಳೆ
ನಿಲ್ಲೆಲೆ ನಾನು ಬರುತೀನಿ । ಗೆಣಗಾತಿ
ನೀ ಕೂದ ಮಲ್ಲೀಗೆ ನನಗೆ ಸಮಪಾಲು....॥

ಕರಿಯ ಕುದುರೀಗೆ ಕಬ್ಬಿಣದ ಕಡಿವಾಣ
ಗಲ್ಲು ಗಲ್ಲೆಂಬೊ ಉರಿಗೆಜ್ಜೆ । ಸೋಲಿಗರುಡುಗ
ಕರಿಯ ಮುಗಿಲಿಂದ ರಥಕಿಳಿದ....॥

ಮಲ್ಲಿಗೆ ಹೂ ಚೆಂದ ಮಲ್ಲಿಗೆ ಕಾಯಿ ಚೆಂದ
ವಲ್ಲೀಯ ಹೆಣ್ಣು ಬಿಡಚೆಂದ । ಆದಾರೆ
ದೂರು ಬಿಳುತಾದೆ ನಿನಮೇಲೆ....॥

ದೂರು ಬಿದ್ದಾರೆ ಬೀಳಾಲಿ ಧೀರನಾಗಿ ನಾನಿರುವೆ
ನೂರು ಬಿದಾರು ನನಗಿರಲಿ । ಎಲೆ ಹೆಣ್ಣೆ
ಇಂದು ನಿನ ಮುಖ ಕಲಿಯಿರಲಿ ...॥

ಬೆಟ್ಟಕ್ಕೆ ಬಿದರಾಸೆ ಬಿದರೀಗೆ ಎಲೆಯಾಸೆ
ಸಣ್ಣ ಕೋಗಿಲೆಗೆ ದ್ವನಿಯಾಸೆ । ಮಳ್ಳಳ್ಳಿ
ಹುಡುಗಿರಿಗೆ ಮಾಣಿಕದ ಮಣಿಯಾಸೆ....॥

ಮುತ್ತನ್ನು ಪುಡಿಮಾಡಿ ಮುಂಬಲ್ಲು ಕೆಳೆಗಿಕ್ಕಿ
ನೆಟಕೊಂದುಳಿಯು ಮೊಸೆಯೋನೆ । (ಮೊಸೆಯೊ) ಈಡಿಗರುಡುಗ
ನೀನು ಕಟ್ಟೀದ ಮರದ ಹೆಸರೇಳೊ....॥

ಮನವ ಹೆಸರು ಮಲ್ಲೀಗೆ ನನ್ನ ಹೆಸರು ಸಂಪೀಗೆ
ಕುಡಿದೋನ ಹೆಸರು ಕುಸುಮಾಲೆ । ಹೊಲೇರುಡುಗ
ತಲೆಹೊಗೋದ ಗುರುತ ಅರಿಯಾನು....॥

ಕುಣಿಗಲ್ಡೇರಿಯು ಮೇಲೆ ಹೂವ ಮಾರುವ ಜಾಣ
ಹಾಗಾಲ ಹೂವ ಹಣವೀಗೆ । ತಕ್ಕೊಂಡು
ಜೂಜುನಾಡೋಳ ತುರುಬೀಗೆ....॥

ಸೂಳೆ ಕಟ್ಟದ ಬುತ್ತಿ ಯಾಲಕ್ಕಿಯಾಗೆ ಘಮ್ಮೆಂದೊ
ಕೊಣದಿಂದಾಚೆ ಕೋವು ಹೊಂದಿ । ಊರು ಮುಂದೆ
ಬಿಚ್ಚಿ ನೋಡಿದರೆ ಬರಿ ಬುತ್ತಿ....॥

ಅರಿಯೋದು ಗುಂಡುಕಲ್ಲು ಮುರಿಯೋದು ರಾಗಿಕಲ್ಲು
ದನಗೂರು ಮೇಲೋಯ್ತು ದಬ್ಬಳ್ಳಿ । ಗಿಬ್ಬಳ್ಳಿ
ಅಲ್ಲಿ ನುಗ್ಗೋಯ್ತು ಪಿಗಳಿಂಗ....॥

ಬಾವಿ ಸೀರಿಗೋಗಿ ಬಣಸಾರ ಎಳೆಕಿತ್ತೆ
ಹಾಯಾನ ಬಾರೋ ಗೆಣೆಗಾರ । ನಾವು
ಜೊತೆ ಸೇರಿ ಜೋಡಕ್ಕಿಯಂಗೆ ತಿರುಗೋಣಾ....॥

ಆಡುವಾಗ ಇಕ್ಕುವಾಗ ಗಿಡವೆಲ್ಲಾ ನಂಟಾರು
ಅಡವೀಯ ಸೊಪ್ಪು ಮಡಿಲೊಡ್ಡಿ । ಕುಯ್ವಾಗ
ಹಡೆದವ್ವ ಗುರುತು ಹಿಡಿಯಾಳು....॥

ಹಡಗದೇರಿಯಮೇಲೆ ಗಿಡವಾದ ಮರವುಟ್ಟೆ
ಅದರ ಕಾಯಿಬೇಕು ಅದರ ಎಲೆಬೇಡ । ಅಣ್ಣಯ್ಯ
ನೀ ಬೇಕು ನಿನ್ನ ಮನೆಬೇಡ....॥

ಗಂಡು ಮಗನುಟ್ಟಿಕೊಂಡಾನು ದಿರುಳೀಯ
ಮುಂಡೋದ್ರಿ ಎಂಬ ಮಗಳುಟ್ಟೆ । ತಂದಾಳಲ್ಲೆ
ಅವಳು ತಂದೇಯ ಕುಲಕೆ ಕೊಡಲೀಯ....॥

ಕುದುರೆ ಮೇಲೆ ಚದುರ ಬೀದಿಗೆ ಬಂದಾ
ಕುದುರೆಲ್ಲೊ ಕುದುರೆ ಮರಿಯೆಲ್ಲೊ । ಅಣ್ಣಯ್ಯ
ನಿನ್ನ ದೊರೆ ಮಾನ್ಯವರ ಮಗಳೆಲ್ಲೊ....॥

ಕುದುರೆ ನೀರಿಗೆ ಬಿಟ್ಟು ಚದುರನೆಲ್ಲಿಗೆ ಹೋದಾ
ಗದುಗ ಬೀಸುತಾಳೆ ಗಂಗಮ್ಮ । ತಮ್ಮಯ್ನ
ಕುದುರೆ ನೀರ ಕುಡಿವ ರಬಸೀಗೆ....॥



# ನೀವು ಧರ್ಮಕ್ಕೆ ಧಾರೆ ಎರೆಕೊಳ್ಳಿ....

ಹೂ ದಂಡೆ ಕುಯ್ಯೋಕೋಗಿ ಕೈ ಬಳೆ ಬಂದೊ
ಕೈ ಬಳೆ ಒಳ್ಗೆ ಕಣ್ಣೀರು ಬಂದೋ
ಕಣ್ಣೀರು ಒಳ್ಗೆ ಪನ್ನೀರು ಬಂದೋ....||

ಪನ್ನೀರ ಕುಡಿಯೋಕೆ ಆನೆಗಳ್ ಬಂದೋ
ಆನೆಗಳ ತಲೆಮೇಲೆ ಅರಿಷಣವ ನೋಡೆ
ಅರಿಷಣದ ಒಳಗೆ ತೊಟ್ಟೀಲ ನೋಡೆ....||

ತೊಟ್ಟೀಲ ಒಳಗೆ ಕಂದಯ್ನ ನೋಡೆ
ಕಂದಯ್ನ ಕೈಲಿ ಬಟ್ಟಾಲ ನೋಡೆ
ಬಟ್ಟಾಲ ಒಳಗೆ ಬಾಳೆ ಹಣ್ಣುನೋಡೆ....||

ಬಾಳೆ ಹಣ್ಣು ತಿನ್ನೋಕೆ ಗಿಣಿರಾಮ ಬಂದಾ
ಗಿಣಿರಾಮನ ಕೈಯೊಳಗೆ ಚೋಟುದ್ದ ಕುಡಿಲು
ಚೋಟುದ್ದ ಕುಡಿಲಿಗೆ ಮಾರುದ್ದ ಹುಲ್ಲು....||

ಮಾರುದ್ದ ಹುಲ್ಲೀಗೆ ಮಲುಕದಂಥ ಎಮ್ಮೆ
ಮಲುಕದಂಥ ಎಮ್ಮೆಗೆ ಗೆಜ್ಜೆ ಕಟ್ಟೆದ ತಂಬಿಗೆ
ಗೆಜ್ಜೆ ಕಟ್ಟೆದ ತಂಬ್ಗೇಲಿ ಸೀರು ಬೋರುಂಬೊ ಹಾಲು....||

ಸೀರು ಬೋರೆಂಬೊ ಹಾಲೀಗೆ ಹೆಂಟಿ ಹೆಂಟಿ ಮೊಸರು
ಹೆಂಟಿ ಹೆಂಟಿ ಮೊಸರಿಗೆ ಹೀರೆ ಹೂವಿನಂಥ ಬೆಣ್ಣೆ....|
ಹೀರೆ ಹೂವಿನಂಥ ಬೆಣ್ಣೀಗೆ ಕಸ್ತೂರಿಯಂಥ ತುಪ್ಪ ತೆಗೆದು

ಮಲ್ಲಿಗೆ ಹೂವಿನಂಥ ಅನ್ನಾವನೆ ಮಾಡಿ
ಉಣ ಬನ್ನಿ ಬಣ ಬನ್ನಿ ಪುಣ್ಯಾಳ್ಳ ಅಳಿಯಾ
ಉಣ ಬಂದಾ ಅಳಿಯನಿಗೆ ಉಂಬಳೀನ ಕೊಟ್ಟೇನು....||

ಅಳಿಯಾಗೆ ಅಂತರ ಗಂಟು
ಮಗಳೀಗೆ ಮುತ್ತಿನ ಬಟ್ಟು
ಕಾಮನಂಗಡಿಯ ಕರಿಯ ಪಲ್ಲಕ್ಕಿ....||

ಭೀಮನಂಗಡಿಯ ಬಿಳಿಯ ಪಲ್ಲಕ್ಕಿ
ನಾವು ಮುತ್ತಿನಂಥ ಮಗಳು ಕೊಟ್ಟೇವು
ನೀವು ಧರ್ಮಾಕೆ ಧಾರೆ ಎರೆಕೊಳ್ಳಿ....||



# ತೂಗು ತೂಗು ಉಯ್ಯಾಲೆಯಾ....

ತೂಗು ತೂಗು ಉಯ್ಯಾಲೆಯಾ
ಶಿವನ ಶೃಂಗಾರದ ಉಯ್ಯಾಲೆಯಾ....||

ಉಯ್ಯಾಲೆನಾಡೋಳೆ ಉಯ್ಯಾಲೆ ಪಾಡೋಳೆ
ವಯ್ಯಾರಿ ಸಣ್ಣ ದನಿಯೋಳೆ....|

ತೂಗು ತೂಗು ಉಯ್ಯಾಲೆಯ
ಶಿವನ ಶೃಂಗಾರದ ಉಯ್ಯಾಲೆಯಾ....|

ವಯ್ಯಾರಿ ಸಣ್ಣ ದನಿಯೋಳೆ-ಲಕ್ಕಮ್ಮ
ಯಾಕೆ ಮಾಡ್ಯಾಳೆ ಜಗಳಾವ....|

ತೂಗು ತೂಗು ಉಯ್ಯಾಲೆಯಾ
ಶಿವನ ಶೃಂಗಾರದ ಉಯ್ಯಾಲೆಯಾ....|

ಯಾಕೆ ಮಾಡ್ಯಾಳೆ ಜಗಳಾವ-ಲಕ್ಕವ್ವ
ಮೂಗೂತಿ ಮುಂಬಾರ ಹೆಣೆಗಂಟೆನಿಂಭಾರ....|

ತೂಗು ತೂಗು ಉಯ್ಯಾಲೆಯಾ
ಶಿವನ ಶೃಂಗಾರದ ಉಯ್ಯಾಲೆಯಾ....|

ಮೂಗೂತಿ ಮುಂಭಾರ ಹೆಣೆಗಂಟೆಂನಿಂಭಾರ-ಲಕ್ಕವ್ವ
ಸಣ್ಣಂಚಿನ ಸೀರೆ ಎಳೆಭಾರ....|

ತೂಗು ತೂಗು ಉಯ್ಯಾಲೆಯಾ
ಶಿವನ ಶೃಂಗಾರದ ಉಯ್ಯಾಲೆಯಾ....|

## ತೂಗೀರೆ ಚಂದ್ರಾನ ತೂಗೀರೆ ರುದ್ರಾನ....

ತೂಗೀರೆ ಚಂದ್ರಾನ ತೂಗೀರೆ ರುದ್ರಾನ
ತೂಗೀರೆ ನಂದಾನ ತೂಗೀರೆ ಕಂದಾನ....।

ಆಲದ ಎಲೆಮೇಲೆ ಬಾಲಾನ ಮಲಗೀಸಿ
ಲೋಲಗನ್ನೆಯರೆಲ್ಲಾ ತೂಗೀರಮ್ಮ....।

ತೂಗೀರೆ ಚಂದ್ರಾನ ತೂಗೀರೆ ರುದ್ರಾನ
ತೂಗೀರೆ ನಂದಾನ ತೂಗೀರೆ ಕಂದಾನ....।

ಬ್ರಹ್ಮ ಲೋಕದಿಂದ ಬ್ರಹ್ಮೇಂದ್ರ ಮೊದಲಾಗಿ
ಬ್ರಹ್ಮಗನ್ನೇರೆಲ್ಲಾ ತೂಗೀರಮ್ಮ....।

ತೂಗೀರೆ ಚಂದ್ರಾನ ತೂಗೀರೆ ರುದ್ರಾನ
ತೂಗೀರೆ ನಂದನ ತೂಗೀರೆ ಕಂದಾನ....।

ನಾಗಲೋಕದಿಂದ ನಾಗೇಂದ್ರ ಮೊದಲಾಗಿ
ನಾಗಕನ್ನೆಯರೆಲ್ಲಾ ತೂಗೀರಮ್ಮ....।

ತೂಗೀರೆ ಚಂದ್ರಾನ ತೂಗೀರೆ ರುದ್ರಾನ
ತೂಗೀರೆ ನಂದಾನ ತೂಗೀರೆ ಕಂದಾನ....।



ಕೃ. ಅವರ

ಾನಪದ ಪ್ರೇಮಗೀತೆಗಳು' ಕೈಗೆತ್ತಿಕೊಂಡಾಗ....

ದಲ್ಲಿ ಕಿರಿದೆನಿಸಿದರೂ ಈ ಸಂಕಲನ ಗುಣದಲ್ಲಿ ಹಿರಿದು. ಗಿ ಅರ್ಥವಾಗುವ ನುಡಿ ಭಾಷೆ, ಹಾಡಲು ಕ್ಲಿಷ್ಟವಾ ಯ ಜಾನಪದ ಗೀತೆಗಳಲ್ಲಿ ಈ ಪ್ರೇಮಗೀತೆಗಳಿಗೆ ಸ್ಥಾನವಿದೆ. ಜನಪದ ಬಾಳಿನಲ್ಲಿನ ಪ್ರೇಮುಮಯ ರ್ಶನವಾಗುತ್ತದೆ. ಸುಂದರವೂ ಸುಮಧುರವೂ ಆದ ಪ್ರೇಮಗೀತೆಗಳು" ಸಂಕಲನ ಹಳ್ಳಿಗಾಡಿನ ಜನತೆಯ ದು ಮುಖದ ಪ್ರತಿಬಿಂಬ—ಅದೇ ಪ್ರೇಮ.

—ತಾಯಿನಾಡು

* * *

ರು ಹಾಡುಗಳಿಗೆ ಜಾನಪದಸಾಹಿತ್ಯ—ಇಂಗ್ಲಿಷಿನಲ್ಲಿ e of the dumb millions ಅಂದಹಾಗೆ ಟೆಯ ಸಾಹಿತ್ಯ ಎಂಬ ಹೆಸರುಬಂದಿದೆ. ಈ ತಿಗಳೆಲ್ಲ ಬಾಯಿಂದ ಬಾಯಿಗೆ ಹರಿದು ಬಂದ ರಸ ; ಬರವಣಿಗೆಗೆ ಬಂದವು ತೀರ ವಿರಳ-ಯಾಕೆಂದರೆ ಹಾಡಿದ ಆಶುಕವಿಗಳು dumb millions ದುಬರಹ ಬಾರದಿದ್ದ ಮೂಕಕವಿಗಳು ಗದ್ಯವಿರಲಿ, ಅದು ಬಳಸುವ ನುಡಿಗಳು, ಉಪಮ, ರೂಪಕಾದಿ (Imagins) ಗಳು ಹಳ್ಳಿಗಾಡಿನ, ಅಶಿಕ್ಷಿತರೆಂಬ ಜನತೆಯ ದಿನಬಳಿಕೆಯಲ್ಲಿರುವವು—ಸುತ್ತಮುತ್ತಿನ ದ ಆರಿಸಿಕೊಂಡವು. ಜನರ ನಿತ್ಯಜೀವನದ ಪ್ರೇಮ-ೋಪ-ತಾಪಗಳನ್ನೆಲ್ಲ ಇದರಲ್ಲಿ ಕಾಣಬಹುದು. ಆದ್ದ ರು ಜೀವನದಿಂದ ಚಿಮ್ಮಿಬಂದ ನೈಸರ್ಗಿಕ, ಪ್ರಾಕೃತಿಕ, ಸಾಹಿತ್ಯ, ಈ ಸಾಹಿತ್ಯ ಹಳ್ಳಿಬಾಳಿಗೆ ಕನ್ನಡಿ ಗ್ರಾಮ್ಯ ನಿಘಂಟು.

—ಶ್ರೀ ಜಿ. ಆರ್. ಪಾಂಡೇಶ್ವರ್,
ALL INDIA RADIO